


# ಹಿಂಗಾರ



ಅರೆಭಾಷೆ ತ್ರೈಮಾಸಿಕ

ಸಂಪುಟ-4 ಸಂಚಿಕೆ-2 ದಿನಾಂಕ : 30.06.2020 ಕೊಡಗು ರೂ. 20/-

ಏಪ್ರಿಲ್ - ಮೇ - ಜೂನ್

2020





ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ





ಕರ್ನಾಟಕ ಸರಕಾರ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ, ಮಡಿಕೇರಿ

# ಹಿಂಗಾರ

ಅರೆಭಾಷೆ ತ್ರೈಮಾಸಿಕ

ಸಂಪುಟ : 4 ಸಂಚಿಕೆ : 2 ದಿನಾಂಕ : 30-06-2020

**HINGARA**
A Quarterly Magazine

Published by
**Karnataka**
**Arebhase Samskruthi**
**Mathu Sahitya Academy**
Coffee Krip, 1st Floor
Rajaseat Road
Madikeri - 571 201
Ph : 08272-223055
arebaseacademy@gmail.ocm
www.arebaseacademy.com

Chief Editor
**Lakshminarayana Kajegadhe**

Editor
**Dr. Dayananda Kudakandi**

Managing Editor
**Chinnaswamy**

Cover Page Photo
**Bharathesha Alsandemajalu**

Printed at
**Sri Krishna Printers**.
Pooja Arcade, Madikeri
Ph. 08272-224919, 9448135592

Pages : 72

Copis : 1200

Vol : 4 - 2

Period : January to March

Price : Rs. 20

3year subscription :
Rs. 200

**ಹಿಂಗಾರ**
ತ್ರೈಮಾಸಿಕ ಪತ್ರಿಕೆ

ಪ್ರಕಾಶಕರು
**ಕರ್ನಾಟಕ**
**ಅರೆಭಾಷೆ ಸಂಸ್ಕೃತಿ ಮತ್ತು**
**ಸಾಹಿತ್ಯ ಅಕಾಡೆಮಿ**
ಕಾಫಿ ಕೃಪಾ, ಒಂದನೇ ಮಹಡಿ,
ರಾಜಸೀಟ್ ರಸ್ತೆ, ಮಡಿಕೇರಿ-571201
ದೂರವಾಣಿ : 08272-223055
arebaseacademy@gmail.ocm
www.arebaseacademy.com

ಪ್ರಧಾನ ಸಂಪಾದಕರ್
**ಲಕ್ಷ್ಮಿನಾರಾಯಣ ಕಜೆಗದ್ದೆ**

ಸಂಪಾದಕರ್
**ಡಾ. ದಯಾನಂದ ಕೂಡಕಂಡಿ**

ವ್ಯವಸ್ಥಾಪಕ ಸಂಪಾದಕರ್
**ಚಿನ್ನಸ್ವಾಮಿ**

ಮುಖಪುಟ ಚಿತ್ರ
**ಭರತೇಶ ಅಲಸಂಡೆಮಜಲು**

ಮುದ್ರಣ
**ಶ್ರೀ ಕೃಷ್ಣ ಪ್ರಿಂಟರ್ಸ್**
ಪೂಜಾ ಆರ್ಕೇಡ್, ಮಡಿಕೇರಿ.
Ph. 08272-224919, 9448135592

ಪುಟಗಳು : 72

ಪ್ರತಿಗಳು : 1200

ಸಂಪುಟ 4 ಸಂಚಿಕೆ 2

ಜನವರಿ - ಮಾರ್ಚ್

ಬೆಲೆ : ರೂ. 20/-

ತ್ರೈವಾರ್ಷಿಕ ಚಂದಾ :
ರೂ. 200

# ಅಧ್ಯಕ್ಷರ ಮಾತ್



ಎಲ್ಲವುಕು ನಮಸ್ಕಾರ.

ಎಪ್ರಿಲ್, ಮೇ, ಜೂನ್, ಸಂಚಿಕೆನ ಹೊತ್ತ ಹಿಂಗಾರನ ಈಗ ನಿಮ್ಮ ಕೈಗಿಡುವ ಹೊತ್ತು. ಇದೇ ನೆಪಲಿ ನಿಮ್ಮೊಟ್ಟಿಗೆ ನಮ್ಮ ಕೆಲ್ಸ ಕಾರ್ಯಗಳ್ನ ಕೂಡ ಬಿಚ್ಚಿಡುವ ಕುಸಿ ನಮಿಗೆ.

ಈ ಹಿಂದೆ ನಾವುಗೆಲ್ಲ ಗೊತ್ತಿರ್ವಂಗೆ ನಮ್ಮದೊಂದು ಅರೆಬಾಸೆ ನಾಟಕದ ತಯಾರಿಲಿ ಇದ್ದೊ. ಇನ್ನೇನು ತೆರೆ ಕಾಣಿಕೆ ಒಂದೇ ದಿನ ಬಾಕಿ ಉಟ್ಟು ಹೇಳಿಕಾಕನ ಕೋವಿಡ್ -19 ನ ಹಿನ್ನಲೆಲಿ ಲಾಕ್ ಡೌನ್ ಘೋಷಣೆ ಆತ್. ಹಂಗಾಗಿ ಏನೂ ಮಾಡಿಕಾಗದೆ ಸ್ವಲ್ಪ ದಿನ ಖಾಲಿಯಾಗಿದ್ದೊ. ಒಂದು ಕಡೆ ಹೊರಗೆ ತಲೆ ಇಡಿಕೇ ಆಗದಂತಹ ಒಂದು ಇಕ್ಕಟ್ಟ್‌ನ ಪರಿಸ್ಥಿತಿ, ಮತ್ತೊಂದು ಕಡೆಯಿಂದ ತುಂಬಾ ಯೋಜನೆಗಳನ್ನ್ ಹಾಕಂಡ್ , ತುಂಬಾ ಹುರುಪಿಂದ ಏನೆಲ್ಲ ಗ್ಯಾನ ಮಾಡ್ಕಂಡ್ ಬೇರೆ ಬೇರೆ ರೀತಿಯಾದಂತಹ ನಮ್ಮ ಅಕಾಡೆಮಿ ಕೆಲ್ಸಗ ಎಲ್ಲಿ ನಿತ್ ಹೋಗಿಬುಟ್ಟದೇನೋ ಅಂತ ಹೆದ್ರಿಕೆ. ಕೈ ಕಟ್ಟಿ ಹೋದಂತ ಸ್ಥಿತಿ. ಯಾಕೇ ಹೇಳಿರೆ ಇರುವ ಮೂರು ವರ್ಸದ ಸಮಯ ನಮಿಗೆ ತೀರಾ ಕಡ್ಮೆ ಆಗಿರ್ಕನ, ಇರುವ ಸಮಯ ಹಿಂಗೇ ಕಳ್ದ್ ಹೋಗಿ ಬುಟ್ಟದನೇನೋತೇಳುವ ಯೋಚನೆ. ಹಂಗಾಗಿ ಹೊರಗೆ ಎಲ್ಲೂ ಕಾರ್ಯಕ್ರಮ ಮಾಡಿಕಾಗದ ಕಾರಣ, ಹೆಂಗೆ ಬೇರೆ ರೀತಿಲಿ ಈ ಹೊತ್ತುನ ನಾವು ಉಪಯೋಗಿಸಿಕಣಕ್ಂತೇಳಿ ನಾವು ಗ್ಯಾನ ಮಾಡಿಕನ ನಮಿಗೆ ಸಿಕ್ಕಿದ್ ಕತೆ-ಕವಿತೆ ಸ್ಪರ್ಧೆ ಮಾಡಿ ಅರೆಬಾಸಿಗರಲ್ಲಿ ಸಾಹಿತ್ಯ ಆಸಕ್ತಿನ ಹುಟ್ಟು ಹಾಕುವಂತದ್ದು. ಈ ಸ್ಪರ್ಧೆಗೆ ತುಂಬಾ ಅರೆಬಾಸೆ ಬರಹಗ ಬಂದಿದ್ದೊಂ ತೇಳುದು ನಿಜಕ್ಕೂ ಕುಸಿ ಕೊಟ್ಟತ್. ಇನ್ನು ನಮ್ಮ ಅರೆಬಾಸೆಲಿ ಭಾಗವತಿಕೆ ಮಾಡುವಂತ ಒಂದು ಒಳ್ಳೆ ಯೋಜನೆನ ಕೈಗೆತ್ತಿಕಂಡೊ. ಅದರೊಟ್ಟಿಗೆ ನಮ್ಮ ಅರೆಬಾಸೆ ಪದ್ಯಗಳಿಗೆ ರಾಗ ಸಂಯೋಜನೆ ಮಾಡುವಂತ ಒಂದು ನಿರ್ಧಾರ ತಕೊಂಡೊ. ಅರೆಬಾಸೆ ಯಕ್ಷಗಾನಕ್ಕೆ ಅರೆಬಾಸೆ ಪದ್ಯಗಳ್ನ ಬರ್ದವು, ಅರೆಬಾಸೆ ಪದ್ಯಗಳಿಗೆ ರಾಗಸಂಯೋಜನೆ ಮಾಡುತ್ತಿರವು ಅರೆಬಾಸಿಗರಲ್ಲದವುಂತೇಳುದು ನಿಜಕ್ಕೂ ಒಂದು ಹೊಸ ಬೆಳವಣಿಗೆ. ಒಂದು ಬಾಸೆ ಬೆಳೇದುಂತೇಳಿರೆ ಹಿಂಗೆನೇ. ಮತ್ತೆ ಯಾಗೋಳ್ನಾಂಗೆ ಹಿಂಗಾರ ಹೊಸ ವಿನ್ಯಾಸಲಿ, ಒಳ್ಳೊಳ್ಳೆ ಬರಹಗಳೊಟ್ಟಿಗೆ ನಿಮ್ಮ ಮುಂದೆ ಕಾಣಿಕೆ ಸಿಗುತ್ತುಟ್ಟು. ಎಲ್ಲರ ಮನೆಯಲ್ಲಿ ಹಿಂಗಾರ ಅವರ ಮೇಜಿನ ಮೇಲೆ ಇದ್ದರೆ ನಮ್ಮ ಶ್ರಮ ಸಾರ್ಥಕ. ಅರೆಬಾಸೆಲಿ ಓದುವ, ಬರೆವ ಸುಖ ನೀವುಗೂ ಸಿಕ್ಕಲಿ. ಹಿಂಗಾರನ ನೆರೆಕರೆಯವೂ ಓದುವಂಗೆ ಮಾಡಿ. ಮತ್ತೆ ಹೊಸ ಕೆಲ್ಸಗಳೊಂದಿಗೆ ನಿಮ್ಮಮುಂದೆ ಬಂದವೆ. ನೀವು ನಮ್ಮೊಂದಿಗೆ ಇರಿ ಅಷ್ಟೇ.

ವಂದನೆಗ

ಲಕ್ಷ್ಮೀ ನಾರಾಯಣ ಕಜೆಗದ್ದೆ
ಅಧ್ಯಕ್ಷರ್

# ಸಂಪಾದಕರ ಮಾತ್



ಅರೆಬಾಸೆನ ಹಿಂಗಾರ ತ್ರೈಮಾಸಿಕ ಪುಸ್ತಕನ ಓದುವ ಪ್ರೀತಿಯ ಎಲ್ಲ ಓದ್‌ಗರಿಗೆ ನಮಸ್ಕಾರಗ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿ ಹೊರತಂದ ನಾಲ್ಕನೆ ಸಂಪುಟದ ಸುರುನ ಸಂಚಿಕೆನ ಓದಿದ ಎಲ್ಲ ಓದ್‌ಗರ್, ಸಾಕಷ್ಟ್ ಒಳ್ಳೆ ಸಲಹೆ, ಸೂಚನೆ ಮತ್ತೆ ಮಾರ್ಗದರ್ಶನ ನಿಡ್ಯೊಳೊ. ನಿಮಿಗೆ ಮೊದ್‌ಲಿಗೆ ನಮನಗಳನ್ನ ಅರ್ಪಿಸಿನೆ.

ಈ ಹಿಂಗಾರ ತ್ರೈಮಾಸಿಕ ಪುಸ್ತಕ ನಾಲ್ಕನೆ ಸಂಪುಟದ ಎರ್‌ಡ್ನೆ ಸಂಚಿಕೆ. ಈ ಸಂಚಿಕೆಲಿ ಏಪ್ರಿಲ್‌ಂದ ಜೂನ್ ತಿಂಗಳವರೆಗಿನ ಸಂಗತಿಗಳ್‌ನ ಸಂಕಲಿಸ್ಯೊಳೊ. ಈ ಸಂಚಿಕೆ ಜೂನ್ ತಿಂಗಳ್‌ಲಿ ಪ್ರಕಟ ಆಕಾಗಿತ್ತ್. ಆದರೆ ಕೋವಿಡ್–19ರ್‌ಂದಾಗಿ ಸಂಚಿಕೆನ ಸರಿಯಾದ ಸಮಯಲಿ ಹೊರತಾಕೆ ಆತ್ಲೆ. ಅದಕ್ಕಾಗಿ ಚಂದಾದಾರರ್, ಓದ್‌ಗರ್ ಮತ್ತೆ ಬರಹಗಾರಲಿ ಕ್ಷಮೆ ಕೇಳ್ತೊಳೆ. ಇನ್ನ್ ಸರಿಯಾದ ಸಮಯಕ್ಕೆ ಪುಸ್ತಕನ ಪ್ರಕಟ ಮಾಡಿ ನಿಮ್ಮ ಕೈ ಸೇರುವಂಗೆ ಪ್ರಯತ್ನ ಪಟ್ಟವೆಂತ ಭರವಸೆ ಕೊಟ್ಟವೆ.

ಈ ಸಂಚಿಕೆಲಿ ಕಟ್ರತನ ಬೆಳ್ಯಪ್ಪನವರ "ಕಾವೇರಿಕಥನಾ" ಮತ್ತೆ ಎಂ.ವಿ. ಮೋಹನ್‌ಕುಮಾರ್ ರವರ "ಕಪ್ಪು ಹೂಗಳ್ನ ಅರಳಿಸ್‌ವ ಮಳೆ" ಅಂತೇಳುವ ಲೇಖನಗಳನ್ನ ಪ್ರಕಟಿಸ್ಯೊಳೊ. ಭಾರತೀಯ ಸೇನೆಲಿ ಕ್ಯಾಪ್ಟನ್ ಆಗಿ ಕೆಲ್ಸ ಮಾಡ್‌ತ್ತಿರ್‌ವ ಯುವ ಪ್ರತಿಭೆ ಕ್ಯಾಪ್ಟನ್ ಲಿಶ್ಮಿತಾ ಅಯ್ಯಪ್ಪ ಬಾರಿಕೆ ಅವರ ಸಣ್ಣ ಪರಿಚಯನ ಈ ಸಂಚಿಕೆಲಿ ಚೊಕ್ಕಾಡಿ ಪ್ರೇಮರಾಘವಯ್ಯನವು ಮಾಡ್ಯೊಳೊ. ಇತ್ತೀಚೆಗೆ ದಿವಂಗತರಾದ ಸಮಾಜ ಸೇವಾ ಧುರೀಣ ತೋಟಂಬೈಲು ನಾಣಯ್ಯರವರ್ನ ಬೈತಡ್ಕಜಾನಕಿ ಬೆಳ್ಯಪ್ಪನವು ಪರಿಚಯಿಸ್ಯೊಳೊ. ರಂಗ ಮಾಂತ್ರಿಕ ಜೀವನ್‌ರಾಂ ಸುಳ್ಯ ಅವರೊಟ್ಟಿಗೆ ವಿನೋದ್ ಮೂಡಗದ್ದೆನವು ನಡ್ಸಿದ ಸಂದರ್ಶನದ ಭಾವಾನುವಾದನ ಪ್ರಕಟಿಸ್ಯೊಳೊ. ಭವಾನಿಶಂಕರ ಅಡ್ತಲೆನವು ಸುಳ್ಯದ ಶಿಕ್ಷಣ ಕ್ರಾಂತಿಯ ಹರಿಕಾರ ಡಾ॥ ಕುರುಂಜಿ ವೆಂಕಟ್ರಮಣ ಗೌಡರ ಅರೆಬಾಸೆ ಪ್ರೀತಿನ ಹಂಚಿಕೊಂಡೊಳೊ. ಡಾ॥ ಕೋರನ ಸರಸ್ವತಿ ಪ್ರಕಾಶ್‌ವು ಅರೆಭಾಷಿಕ ಸಂಸ್ಕೃತಿಲಿ ಗಾದೆಗಳ ಮಹತ್ವನ ಮತ್ತೆ ಅಕಾಡಿಮಿನವು ಚೆಂಬುಲಿ ನಡ್ಸಿದ ಕೆಡ್ಡಾಸ ಹಬ್ಬದ ಗೌಜಿನ ಶ್ರೀಮತಿ ಸ್ಮಿತಾ ಅಮೃತರಾಜ್‌ವು ಪರಿಚಯಿಸ್ಯೊಳೊ. ಕುಸುಮಾಧರ ಎ.ಟಿ ಯವರ "ಉಪ್ಪು ತಿಂದವ ನೀರ್ ಕುಡಿಯೋಕೇ" ಅಂತೇಳುವ ಚಿಂತನೆನೆ, ಕರ್ಣಯ್ಯನ ಈಶ್ವರನವರ ದಿನದಲಿ ಅರ್ಧಗಂಟೆ ವ್ಯಾಯಮ ಮಾಡ್ರೆ ಸಿಗುವ ಲಾಭನ ಮತ್ತೆ ಡಾ: ನಿವೇದಿತಾರ 'ನಮ್ಮ ಆರೋಗ್ಯ ನಮ್ಮ ಕೈಲಿ'ಂತೇಳ್ವ

ಆರೋಗ್ಯ ಲೇಖನನ ಸಂಚಿಕೆಲಿ ಹಾಕ್ಯೊಳೊ.

ಅಮೆ ಮನೆ ರಶ್ಮಿಯವರ "ಕಾಡ್ ಬೀರ", ಪ್ರೊ. ಶಶಿಧರ್ ಬಿ.ಆರ್. ರವರ "ಮಾಟ", ಹೊಳೆಕರೆ ಚೆಂಗಪ್ಪ ರವರ 'ತಂತ್ರ', ದೀಕ್ಷಾ ಐವರ್ನಾಡು ರವರ 'ಮಾನವೀಯತೆಯ ಬೆಲೆ' ಮತ್ತೆ ಸ್ಮಿತಾ ಅಮೃತರಾಜ್ ರವರ ನುಕ್ಕುಳನ್ನು ಹುಡ್ಕಿಕಂಡ್ ಅಂತೇಳುವ ಕಥೆಗಳ್ನ ಪ್ರಕಟಿಸ್ಯೊಳೊ. ಸೀತಾರಾಮ ಕೇವಳರ "ಗುರುಲಿ ನಂಬಿಕೆ" ಅಂತೆಳುವ ಮಕ್ಕಳ ಕಥೆನ, ಲೀಲಾ ದಾಮೋದರವರ "ಪಟ್ಟೆ ಹುಲಿನೂ ಚಿಪ್ಪು ಹಂದಿನೂ" ಮತ್ತೆ ಪಿ.ಜಿ. ಅಂಬೆಕಲ್ ರವರ 'ಮೋರೆ ಮುಚ್ಚಿಕಂಡ್ ಓಡಾಡುವಂಗೆ ಆತಲೆ' ಅಂತೇಳುವ ಹರಟೆ ಮತ್ತೆ ಹಾಸ್ಯನ ಕೂಡ ಪ್ರಕಟಿಸ್ಯೊಳೊ. ಡಾ ಪುರುಷೋತ್ತಮ ಕೆ.ವಿ. ಕರಂಗಲ್ಲುವರ "ಅರೆಬಾಸೆಲಿ ಪ್ರಕಟ ಅದ ರೂಪಕ ಮತ್ತೆ ನಾಟಕ ಪುಸ್ತಕಗಳ ಅವಲೋಕನನ" ಮತ್ತೆ ಸಂಗೀತ ರವಿರಾಜ್‌ರವರ "ಪುಂಸ್ತ್ರೀ ಕೃತಿಯ ಪರಿಚಯನ" ಪುಸ್ತಕ ವಿಮರ್ಶೆ ಭಾಗಲಿ ಪ್ರಕಟಿಸ್ಯೊಳೊ. ಬನ್ನಿ ಓದೋಮೊಂತೇಳುವ ಅಂಕಣಲಿ "ಸ್ವಾಮಿ ಮತ್ತು ಅವನ ಸ್ನೇಹಿತರು" ಅಂತೇಳುವ ಅನುವಾದಿತ ಕಾದಂಬರಿನ ಕಂಡಿಕೆನ, ಕವನ ಭಾಗಲಿ ಕಾವೇರಿಮನೆ ಡಾ. ಬೋಜಪ್ಪನವರ 'ನಮನಃ' ಮತ್ತೆ ಕುಂಞೇಟಿ ಶಿವರಾಮಗೌಡರ 'ಕೊರೋನಾ' ಅಂತೇಳುವ ಕವನನ ಹಾಕ್ಯೊಳೊ. ಮುಖಪುಟ ಚಿತ್ರ ಕನ್ನಿಕಂಬದ ಬಗ್ಗೆ ಭರತೇಶ್ ಅಲಸಂಡೆಮಜಲುನವು ಮಾಹಿತಿ ಕೊಟ್ಟೊಳೊ. ಜೊತೆಗೆ ಹೊಸದಾಗಿ ಅಕಾಡೆಮಿಗೆ ಸರಕಾರ ನೇಮಿಸಿದ ಸದಸ್ಯರ ಕಿರ್‌ಪರಿಚಯನ ಕೂಡ ಸಂಚಿಕೆಲಿ ಮಾಡ್ಯೊಳೊ.

ಸಂಚಿಕೆಲಿ ಪ್ರಕಟ ಆದ ಬರವಣೆಗೆಗೆ ಚಿತ್ರಕಲಾವಿದ ಬಿ.ಎಸ್.ಸತೀಶ್‌ನವು ಗೆರೆಗಳ ಮೂಲಕ ಜೀವ ನೀಡ್ಯೊಳೊ. ಸಂಚಿಕೆನ ಹೊರತಾಕೆ ಅಕಾಡೆಮಿ ಅಧ್ಯಕ್ಷರ್, ಸಹ ಸಂಪಾದಕರ್, ಸರ್ವ ಸದಸ್ಯರ್, ರಿಜಿಸ್ಟ್ರಾರ್ ಸಹಕರಿಸ್ಯೊಳೊ. ಬರಹಗಾರರು ತಮ್ಮ ಅಮೂಲ್ಯವಾದ ಬರವಣಿಗೆಗಳ್‌ನ ನೀಡಿ ಸಂಚಿಕೆಗೆ ಅರ್ಥ ತಂದ್ ಕೊಟ್ಟೊಳೊ. ಪ್ರತಿ ತಿದ್ದುವಲ್ಲಿ ಸಹ ಸಂಪಾದಕರಾದ ಪುರುಷೋತ್ತಮ ಕಿರ್ಲಾಯ, ಸದಸ್ಯರಾದ ಬೈತಡ್ಕ ಜಾನಕಿ ಬೆಳ್ಯಪ್ಪ ಮತ್ತೆ ಜಯಪ್ರಕಾಶ್ ಗೌಡ ಮೋಂಟಡ್ಕ ಮತ್ತೆ ಎಲ್ಲಾ ಸದಸ್ಯರ್ ಕೈ ಜೋಡಿಸ್ಯೊಳೊ. ಭರತೇಶ ಅಲಸಂಡೆಮಜಲುನವು ಮುಖಪುಟದ ಪೋಟೊ ನೀಡ್ಯೊಳೊ. ಶ್ರೀ ಕೃಷ್ಣ ಪ್ರಿಂಟರ್ಸ್, ಮಡಿಕೇರಿ ಇವು ಲಾಯ್ಕಲಿ ಮುದ್ರಿಸಿ ಸಹಕರಿಸ್ಯೊಳೊ. ಸಂಚಿಕೆನ ಪ್ರಕಟಿಸಿಕೆ ಸಹಕರ್‌ಸಿದ ಎಲ್ಲವ್ಕೆ ಕೃತಜ್ಞತೆಗಳ್‌ನ ಅರ್ಪಿಸಿನೆ.

✍ **ಡಾ. ದಯಾನಂದ ಕೂಡಕಂಡಿ**

ದಿನಾಂಕ : 30.06.2020 ಸಂಪಾದಕರ್

ಪ್ರಕಟ ಆದ ಬರವಣಿಗೆಗೆ ಆಯಾ ಬರಹಗಾರರೆ ಜವಾಬ್ದಾರರ್.

# ಹಿಂಗಾರ ಒಡ್ಸ್‌ಕನ

ಲೇಖನ

# ಕಾವೇರಿ ಕಥನಾ

ಕೊಡಗ್‌ನ ಪಶ್ಚಿಮ ಘಟ್ಟ ಸಾಲ್‌ಲೀ ಬ್ರಹ್ಮಗಿರಿ ಬೆಟ್ಟ ಎತ್ತರಕ್ಕೆ ಬೆಳ್ದುನಿತ್ತುಟು. ಆ ಬೆಟ್ಟ ಮುನಿಗಳಿಗೆ ತಪಸ್ ಮಾಡಿಕೆ ಹೇಳ್ದ ಸ್ಥಳ. ಹಂಗೆನೇ ಆ ಬೆಟ್ಟಲೀ ಕವೇರ ಮುನಿ ಅಗಸ್ತ್ಯ ಮುನಿ ಮತ್ತೆ ಕಣ್ವ ಮುನಿಗ ತಪಸ್ ಮಾಡಿಕಂಡ್ ಇದ್ದೊಗಡ. ಕವೇರ ಮುನಿಗೆ ಲೋಪಮುದ್ರೆಂತ ಹೇಳ್ವ ಮಗಳೊಬ್ಬಳು ಇತ್ತ್. ಲೋಪಮುದ್ರೆ ಕವೇರ ಮುನಿಯ ಮಗಳು ಆಗಿದ್ದುದರಿಂದ ಬೆಳ್ದ್ ದೊಡ್ಡವಳು ಆದಮೇಲೆ ಅವಳ ಹೆಸರ್ ಕಾವೇರಿಂತ ಆತ್. ಅಗಸ್ತ್ಯ ಮುನಿ ಕಾವೇರಿನ ನೋಡಿ ಖುಷಿಯಾಗಿ ಮೊದುವೆ ಆಕೆ ಹೊರಟತ್. ಆಗ ಕಾವೇರಿ ಒಂದು ಕರಾರ್ ಹಾಕಿತ್. ಅದ್ ಏನ್‌ಂತ ಹೇಳಿರೇ, ಅಗಸ್ತ್ಯ ಕಾವೇರಿನ ಒಂದು ಗಳಿಗೆನೂ ಬುಟ್ಟ್ ಎಲ್ಲಿಗೂ ಹೋಕೆ ಆಗದ್‌ಂತ ಕರಾರ್. ಈ ಮಾತಿಗೆ ಅಗಸ್ತ್ಯ ಒಪ್ಪಿ ಕಾವೇರಿನ ಮೊದವೆ ಆತ್. ಬಹಳ ಸಮಯ ಒಪ್ಪಂದ ಪ್ರಕಾರ ನಡ್ಕಂಡ್ ಬಂದೊ. ಹಿಂಗೆ ಇರ್ಕಾಕನ ಒಂದು ದಿನ ರಾತ್ರಿ ಅಗಸ್ತ್ಯ ಎದ್ದ್ ತಪಸ್ಸಿಗೆ ಹೋತು. ಕಾವೇರಿ ಬೆಳಿಗ್ಗೆ ಎದ್ದ್ ನೋಡ್ಕನಾ ಅಗಸ್ತ್ಯ ಬಿಡಾರಲಿ ಇತ್ತ್‌ಲೆ. ನಮ್ಮ ಒಪ್ಪಂದನ ಅಗಸ್ತ್ಯ ಮುರ್ದ್ ಹಾಕಿತ್ತ್‌ಂತ ಹೇಳಿ ಬಹಳ ಸಿಟ್ಟ್ ಬಂದ್, ಕಾವೇರಿ ಬ್ರಹ್ಮಗಿರಿ ಬೆಟ್ಟಂದ ದುಮುಕಿ ಗುಪ್ತ ಗಾಮಿನಿಯಾಗಿ, ನೀರಾಗಿ ಹರ್ದ್ ಹೋತು. ನೀರಾಗಿ ಹರ್ದ್‌ಕಂಡ್ ಬಂದ್ ಭಾಗ ಮಂಡಲಲೀ ಕನ್ನಿಕೆ ಮತ್ತೆ ಸುಜ್ಯೋತಿಯರ ಜೊತೆಗೂಡಿ ನೀರಾಗಿ ಹರ್ದ ಸ್ಥಳವೇ ಇಂದಿಗೂ ಪವಿತ್ರ ಪುಣ್ಯ ಭಾಗಮಂಡಲ. ಅಲ್ಲಿ ಭಗಂಡೇಶ್ವರನ ದೇವಸ್ಥಾನ ಉಟ್ಟು.



ಕಾವೇರಿ ಹಂಗೆನೇ ಹರ್ದ್‌ಕಂಡ್ ಬಂದ್ ಪಾಲೂರಿನ ಹರಿಶ್ಚಂದ್ರತೇಳ್‌ವಲ್ಲಿ ಸ್ವಲ್ಪ ವಿಶ್ರಾಂತಿ ತಕ್ಕಂಡ್, ಮುಂದೆ ಹರ್ಕಂಡ್ ಬಂದ್ ಬಲಮುರಿಗೆ ಬಾತ್. ಆಗ ಬಲಮುರಿನ ಗಂಡಸರೂ ಹೆಂಗಸರೂ ಬಂದ್, ಕಾವೇರಿನ ಮುಂದೆ ಹೋಕೆ ಬೊತ್ತುಂತ ತಡ್‌ದೊ, ಆಗ ಕಾವೇರಿ ಬಲಗಡೆಂದ ಒಂದು ಸಲ ತಿರುಗಿ, ನನ್ನನ್ನೂ ಯಾರು ತಡಿಯಕ್ಕೆ ಆಗದ್, ನಾನ್ ಲೋಕಕಲ್ಯಾಣಕ್ಕಾಗಿ ಹೊರ್‌ಟೊಳೆಂತ ಹೇಳಿ, ಜನಗಳಿಗೆ ಆಶೀರ್ವಾದ ಮಾಡಿ ಮುಂದೆ ಹರ್ಕಂಡ್ ಹೋತು. ಕಾವೇರಿ ಬಲಮುರಿಲಿ ಬಲಗಡೆಂದ ತಿರ್‌ಗಿ ಹೋದ ಕಾರಣಂದ ಆ ಗ್ರಾಮಕ್ಕೆ ಬಲಮುರಿತ ಹೆಸ್‌ರ್ ಆತ್. ನೀರ್‌ಗೆ ಇಳ್ದ್ ಕಾವೇರಿನ ಕೊಡವ ಹೆಂಗಸರ್ ತಡ್ದ್‌ದರಿಂದಲೇ ಅವರ ಸೀರೆನಾ ಮುಂದಿನ ನೆರಿಗೆ ಹಿಂದಕ್ಕೆ ತಿರುಗಿದರಿಂದಲೇ ಇಂದಿಗೂ ಕೊಡವ ಹೆಂಗಸರ್, ತಮ್ಮ ಸೀರೆ ನೆರಿಗೆನ ಹಿಂದಕ್ಕೆ ಇಡುದರ್‌ನ ಕಾಣ್ತಾವಳೊ. ಬಲಮುರಿಲೀ ಕಾವೇರಿ ಹೊಳೆನ ಬಲಭಾಗಲಿ ಇಂದಿಗೂ ಅಗಸ್ತ್ಯೇಶ್ವರನ ದೇವಸ್ಥಾನ ಉಟ್ಟು. ಹೊಳೆನ ಎಡಭಾಗಲಿ

ಕಾವೇರಿನ ಕಣ್ವಋಷಿ ಹುಡುಕಿಕಂಡ್ ಬಂದ್ ನೆಲೆ ನಿಂತವರ್‌ಂದ ಅಲ್ಲಿ ಕಣ್ವ ಮುನಿಯ ದೇವಸ್ಥಾನ ಇಂದಿಗೂ ಉಟ್ಟು.

ಕಾವೇರಿ ಹಂಗೆನೇ ಮುಂದೆ ಹರ್ಕಂಡ್ ಹೋಗಿ ಕೊಡಗ್‌ನ ಗುಯ್ಯಂತ ಹೇಳ್ವಲ್ಲೀಯೂ ಕಾವೇರಿ ಜಾತ್ರೆ ನಡ್ವದೆ. ಕಾವೇರಿ ಮುಂದೆ ಕುಶಾಲನಗರಕ್ಕೆ ಹೋಗಿ ಹಾರಂಗಿ ಹೊಳೆ ಜೊತೆಗೂಡಿದೆ. ಅಲ್ಲಿನ ಕಣಿವೆ ಎಂಬಲ್ಲಿ ಜಾತ್ರೆ ನಡ್ವದೆ. ಹಂಗೆನೇ ಮುಂದು ಹುಣುಸೂರು ಹತ್ತಿರ ಲಕ್ಷ್ಮಣ ತೀರ್ಥ ಜೊತೆಗೂಡಿದೆ. ಹಲವಾರು ಹೊಳೆಗ ಕಾವೇರಿನ ಜೊತೆಗೂಡಿ ಹೋಕನಾ ಮೈಸೂರ್ಲಿ ಕನ್ನಂಬಾಡಿ ಅಣೆಕಟ್ಟೆ ಕಟ್ಟಿ ನೀರ್ ಶೇಖರಣೆ ಮಾಡಿ ಊರು ಊರುಗಳಿಗೆಲ್ಲಾ ಕುಡಿಯಕ್ಕೂ ಕೃಷಿಗಳಿಗೂ ನೀರ್ ಉಣ್ಸಿವೆ. ಇದೇ ಕಾವೇರಿ ಬಲಮುರಿರ್ಲೀ ಹೇಳ್ದ ಮಾತ್. ನಾನ್ ಲೋಕಕಲ್ಯಾಣಕ್ಕಾಗಿ ಹೊರಟೋಳೊತ. ಕಾವೇರಿ ಕೊಟ್ಟ ಮಾತಿಗೆ ತೊಪ್ಪಿತಿಲೆ. ಕಾವೇರಿ ಲೋಕಕಲ್ಯಾಣ ಮಾಡಿಕಂಡ್ ಮುಂದೆ ಹೋಗಿ ತಮಿಳುನಾಡಿಗೂ ನೀರ್‌ಕೊಟ್ಟತ್ತ್. ಮುಂದೆ ಹೋಗಿ ಬಂಗಾಳಕೊಲ್ಲಿನ ಸೇರ್‌ತ್. ಕಾವೇರಿ ನೀರಿಗಾಗಿ ಇಂದಿಗೂ ಕರ್ನಾಟಕ ಮತ್ತೆ ತಮಿಳುನಾಡಿನ ಜಗಳ ಮುಂದುವರಿಕಂಡೆ ಉಟ್ಟು.

ಪ್ರತೀವರ್ಷ ಅಕ್ಟೋಬರ್ 17ರ ತುಲಾ ಸಂಕ್ರಮಣ ದಿನದಂದ್ ಭಾಗಮಂಡಲ ಮತ್ತೆ ತಲಕಾವೇರಿರ್ಲೀ ಜಾತ್ರೆ ನಡ್ವದೆ. ಅಂದ್ ಜ್ಯೋತಿಷ್ಯರ್ ಹೇಳ್ದ ಸಮಯಕ್ಕೆ ಸರಿಯಾಗಿ ತಲಕಾವೇರಿಯ ಕುಂಡಿಗೆಲಿ ತೀರ್ಥೋದ್ಭವ ಆದೆ. ಆಗ ಯಾತ್ರಿಕರ್ ಕೊಳಕ್ಕೆ ಇಳ್ದ್ ಸ್ನಾನ ಮಾಡ್ತಾ ತೀರ್ಥ ಸ್ವೀಕಾರ ಮಾಡುವೆ. ನನ್ನ ಅಪ್ಪ ಕುಶಾಲಪ್ಪನವು 12 ವರ್ಷ ಬುಡದೇ ಬಲಮುರಿಂದ ಕಾಲ್ ನಡಿಗೆಂದಲೇ ಹೋಗಿ ಕಾವೇರಿ ತೀರ್ಥಸ್ನಾನ ಮಾಡ್ದೊಳಂತ ಹೇಳಿಕೆ ನಂಗೆ ತುಂಬಾ ಹೆಮ್ಮೆ ಆದೆ. ಅಪ್ಪ 12 ವರ್ಷ ಬುಡದೇ ಕಾವೇರಿ ತೀರ್ಥಸ್ನಾನ ಮಾಡಿದರ ಫಲ ನಂಗೆ ಸಿಕ್ಕಿತ್‌ಂತ ಹೇಳ್ಬು ಮತ್ತೊಂದು ಖುಷಿ. ಉದಾಹರಣೆಗೆ 2019 ರ ಆಗಸ್ಟ್ 29 ರ ಗುರುವಾರ, ಕರ್ನಾಟಕ ಸರಕಾರ ನನ್ನನ್ನ ಡೆಲ್ಲಿಲಿ ಜರುಗಿದ ಫಿಟ್ ಇಂಡಿಯಾ ಕ್ಯಾಂಪೇನ್‌ಲಿ ಭಾಗಿಯಾಗಿ ಮಾನ್ಯ ಪ್ರಧಾನಿ ನರೇಂದ್ರ ಮೋದಿಯವರ ಒಟ್ಟಿಗೆ ಮಾತಾಡಿಕೆ ಸಿಕ್ಕಿದ ಅವಕಾಶ ಬಹಳ ದೊಡ್ಡ ಸಂಗತಿ. ಇದ್ ನನ್ನ ಭಾಗ್ಯ. ನಾನ್ ಸರಕಾರಕ್ಕೆ ಚಿರಋಣಿ.

ಅಕ್ಟೋಬರ್ 18 ರಂದ್ ನಮ್ಮ ಬಲಮುರಿಲೂ ಕಾವೇರಿ ಜಾತ್ರೆ ನಡ್ವದೆ. ಭಕ್ತಾಧಿಗ ಕಾವೇರಿ ಹೊಳೆಲಿ ಸ್ನಾನ ಮಾಡಿ ಅಗಸ್ತ್ಯೇಶ್ವರನ ದೇವಸ್ಥಾನಲಿ ಹಣ್ಣು ಕಾಯಿ ಮಾಡಿ ತೀರ್ಥ ಪ್ರಸಾಧ ಸ್ವೀಕರಿಸುವೆ. ಮಾತೆ ಕಾವೇರಿನ ಜನ್ಮ ಸ್ಥಳವಾದ ಬ್ರಹ್ಮಗಿರಿ ಬೆಟ್ಟದ ಬುಡದ ಮಣ್ಣು ಮತ್ತೆ ಕಾವೇರಿ ತೀರ್ಥನ ಇದೇ ಆಗಸ್ಟ್ 5 ರ ಬುಧವಾರ ಮಾನ್ಯ ಪ್ರಧಾನಿ ನರೇಂದ್ರ ಮೋದಿ ಮತ್ತೆ ಗುರುಗ, ಉತ್ತರ ಪ್ರದೇಶದ ಅಯೋಧ್ಯಲಿ ರಾಮಜನ್ಮಭೂಮಿಲಿ ರಾಮಮಂದಿರಕ್ಕೆ ಭೂಮಿಪೂಜೆ ಮಾಡಿ, 22 ಕೆ.ಜಿ. ಬಾರದ ಬೆಳ್ಳಿ ಇಟ್ಟಿಗೆಂದ ಶಿಲಾನ್ಯಾಸ ಮಾಡ್ವನ ಕಲ್ಲಡಿಗೆ ಹಾಕುವೆಂತ ಗೊತ್ತಾಗುಟು. ಈ ಕಾವೇರಿ ಮಹಿಮೆಂದ ಇಂದಿಗೂ ಕೊಡಗ್‌ನ ದಕ್ಷಿಣ ಕಾಶಿಂತ ಹೇಳುವೆ. ಶ್ರೀ ಕಾವೇರಿ ಮಾತೆಯ ಕೃಪೆಂದ ಈಗ ಜಗತ್ತ್‌ಲಿ ಹರಡಿದ ಕೊರೋನಾ ಸೋಂಕು ಸಂಪೂರ್ಣ ಕಡಿಮೆ ಆಗಿ, ಲೋಕಕಲ್ಯಾಣ ಆಗಲೀಂತ ನಾನ್ ಹೇಳಿಕಂಡ್ ಈ ಕಾವೇರಿ ಕಥನನ ಮುಕ್ತಾಯ ಮಾಡಿನೆ.

**✍ ಕಟ್ರತನ ಕೆ. ಬೆಳ್ಯಪ್ಪ,** ಬಲಮುರಿ ಗ್ರಾಮ, ಮಡಿಕೇರಿ



# ಕಪ್ಪು ಹೂಗಳ್‌ನ ಅರಳಿಸ್‌ವ ಮಳೆ

ಮೂಲೆ–ಮೂಲೆಲಿ
ಸೇರಿಕಂಡ್ ಮೌನವ್ರತ
ಮಾಡ್‌ಕಂಡಿದ್ದ
ಮೊಗ್ಗುಗಳೆಲ್ಲಾ ಈಗ
ಪ್ರತ್ಯಕ್ಷ ಆಗಿ ಜೀವತುಂಬಿ
ಅರಳಿ ಹೂವಾಗಿ ಕಂಡ್
ನಕ್ಕು ನಲಿಯುತ್ತಾವೊಳೊ.
ಬಣ್ಣ ಬಣ್ಣದ ಪ್ಲೇನ್‌ಗಳ್ಲಿ
ಗೆರೆಯ ಸ್ವರೂಪಗಳ್ಲಿ,
ಹೂನ ಚಿತ್ತಾರಗಳ್ಲಿ ಹಿಂಗೆ
ಬೇರೆ ಬೇರೆ ವಿನ್ಯಾಸಗಳ್ಲಿ
ತೆರೆ ಸರ್ರಿ ವೇದಿಕೆಯೇರಿ
ಪ್ರದರ್ಶನಕೆ ಬಾಕೆ ಸಕಾಲ
ಆಗುಟ್ಟು. ಅರೆ... ಕಪ್ಪು
ದುಃಖದ ಸಂಕೇತ
ಆಗಿರುಕನ ಇಳೆ ಮೀಯುವ
ಈ ಕಾಲಲಿ ಕಪ್ಪು ಕೊಡೆಗಳ್ ಅರಳ್‌ವಷ್ಟ್ ಮತ್ತೆ ಯಾವ ಬಣ್ಣಸ ಕಮ್ಮಿ. ಕಪ್ಪು ಕೊಡೆಗಳಿಗೀಗ ಮಳೆಯ ಚೈತನ್ಯದ ಪುಳಕ ಆಗುಟ್ಟು.

"Black colour is sentimentally bad, but every Black board makes the student's life bright" ಹೇಳಿ ರಾಷ್ಟ್ರಪತಿ ಡಾ॥ ಅಬ್ದುಲ್ ಕಲಾಂನವರ ಅದ್ಭುತ ಸಾಲ್‌ಗಳನ್ನ ನೆನಪಾದೆ. ಈ ಕಾಲಲಿ ಇಳೆಯ ತೊಳೆಯಕೆ ಮಳೆ ಸುರಿಕಾಕನ ಮಳೆ ಹನಿಯ ತಾಳಕ ಹೆಜ್ಜೆಯಿಟ್ಟ್ ತೇಲಿಕಂಡು ಇದ್ದ ಕಪ್ಪು ಕೊಡೆಗಳ್‌ದ್ ತಲೆ ಚಂಡಿ ಆಗದೆ ಕಾಪಿಡುವ ಮುಚ್ಚಳದಂಗೆ (ಗೊರ್‌ಗದಂಗೆ) ಜೀಗಿ ಹೋದ ಕೊಡೆಗ ಇವು.

ಅಜ್ಜನ ಕೊಡೆ ಹೇಳಿ ದೊಡ್ಡ ಕೊಡೆನ ಹಿಡಿತಿದ್ದ ಕಾಲಲಿ ಮರದ್ದು ಕೊಕ್ಕೆ ಕಾಲ್‌ನ ದೊಡ್ಡ ಕೊಡೆನ ಈಗಿನವು ಯಾರ್ ಹಿಡಿಯುಲ್ಲೆ. ಗೂಡೆಗಳಿಗೆ ಮುಜುಗರ ಇದ್ದದೆ. ಈಗೀಗ ಅದೇ ಆಕಾರದ ಕಾಲ್‌ನ ದೊಡ್ಡ ದೊಡ್ಡ ಕೊಡೆಗ ಬೇರೆ ಬೇರೆ ಹೊಸ ಹೊಸ ವಿನ್ಯಾಸಲಿ ಅರಳುತ್ತಾ ಉಟ್ಟು. ಈಗಿನ ಕಾಲಲಿ ಗೂಡೆಗ ಟ್ರೆಂಡ್ ಆಗಿ ಅಲಂಕರಿಸುತ್ತಾವೊಳೊ.

ಭಾರೀ ಹಿಂದಿನ ಕಾಲಂದ ಅಂದರೇ ರಾಜರ ಕಾಲಂದಲೇ ಕೊಡೆಗಳಿಗೊಂದು ವಿಶಿಷ್ಟ ಸ್ಥಾನ ಇತ್ತ್. ಊರ್ ಪಟೇಲ್ರ್‌ನ ಕೊಡೆ ಹಿಡ್ದ್ ಗೌರಿ ಉತ್ಸವ ಪರಿನ ನೋಡೊಕೊ. ದೊಡ್ಡ ಮಕ್ಕಳಿಗೂ ಕೊಡೆ ಹಿಡಿಯುದು ವಿಜೃಂಭಣೆಯ ಪ್ರತೀಕ ಆಗಿ ಸ್ವೀಕರಿಸುವೆ. ಆ ಕಾಲಲಿ ಬರೀ ಕಪ್ಪು ಬಣ್ಣದ ಕೊಡೆಗ ಮಾತ್ರ ಇದ್ದುದರ್‌ಂದ

ಅವರ ಮೇಲೆ ಬಣ್ಣದ ಬಟ್ಟೆನ ಹಾಸುತ್ತ ಇದ್ದೊ.

ಸ್ವಿಚ್ ಮೇಲೆ ಒಮ್ಮೆ ಬೆರಳ್ ಇಸಿರೆ ಸಾಕ್ ಕೊಡೆಗೆ ಎಲ್ಲಿಲ್ಲದ ಹುರುಪು. ಅನುಮತಿ ದೊರೆತದ್ದೇ ತಡ ಒಮ್ಮೆಗೆ ಅರಳಿ ಸಕ್ಕ್ ಕ್ಷಣ ಮಾತ್ರಲಿ ತನ್ನ ಜವಾಬ್ದಾರಿನ ನಿಭಾಯಿಸಿ ಬುಟ್ಟದೆ. ಯಾವ್ಯಾವ ಆಕಾರಲಿ ಕೊಡೆಗ ಅಂಗಡಿಗೆ ಬಂದೊಳೊತೇಳಿ 'ಸ್ನಾನೋ ಕೊಡೆ' ತೇಳ್ವ ಕೈ ಚೆರ್ನ್ ಆಕಾರದ ಸಣ್ಣ ಕೊಡೆಗ ಸ ಎಲ್ಲಾ ಕಡೇಲಿ ವ್ಯಾಪಿಸಿಕಂಡ್ ಅಚ್ಚರಿ ಮೂಡಿಸುತ್ತಾ ಉಟ್ಟ್. ಸಣ್ಣ ಮಕ್ಕ ಅಂತೂ ಅವು ಹೇಳ್‌ದ್ದೇ ಆತುತೇಳ್ವ ಹಠ. ಜೊತೆಯುವು ಹತ್ರ ಇದ್ದಂಗೆ, ಜಾಹಿರಾತ್‌ಲಿ ಗುರುತಿಸಿಕಂಡ್ ಇದ್ದಂಗೆ ಕೊಡೆಗಳನ್ನ ತಕೂಣೋಕುತೇಳ್ವ ಆಸೆ. ಸರಿಯಾಗಿ ಸನ್ ಬ್ರಾಂಡ್, ಜಾನ್‌ಸನ್ ಪೋಷಿತೇಳ್ವ ಅದೆಷ್ಟು ಕಂಪನಿಗಳ ಆಕರ್ಷಕ ಕೊಡುಗೆ ನೀಡ್ವ ಜಾಹಿರಾತ್‌ಂದ ಮಕ್ಕಳ್‌ನ್ನ ಕೈಬೀಸಿ ಕರ್‌ದವೆ.

ಶಾಲೆಗೆ ಹೋಗ್ವ ಮಕ್ಕಳಿದ್ದರೆ ಮನೇಲಿ ಶಾಲೆ ಸುರು ಆದಂಗೆ ಮಾಡೋಕಾದ ಸಿದ್ಧತೆ ಜತೆಲಿ ಕೊಡೆ ಜೋಡಿಸುದು ಒಂದು. ಕೊಡೆ ತಕಂಡ್ ಅದರ ಒಳ್ಳೆ ಸೂಜಿದಾರಂದ ಇಲ್ಲರೆ ಪೈಂಟ್‌ಂದ ಮಕ್ಕಳ ಹೆಸ್ರು ಇಲ್ಲರೆ ಇನ್ಷಿಯಲ್ ಹೊಲ್ಟ್ ಬರ್ಟ್ ಗುರುತು ಮಾಡಿಕಳ್ಳುವ ಜಾಗೃತೆ ಅಮ್ಮಂದ್.

'ಜೋರಾಗಿ ಮಳೆ ಬಾತ್... ಗದ್ದೇಲಿ ನೀರಾತ್..' ಈ ಹಾಡ್‌ನ ಕೇಳ್‌ಕಾಕನ ಸಣ್ಣದರಲ್ಲಿ ನಡೆತಿದ್ದ ನೆನಪ್‌ನ ಹೆಜ್ಜೆಗ ನಮ್ಮ ಕಾಲ್‌ನ್ನ ಕುಣ್‌ಸುವೆ. ನಾವು ಸಣ್ಣದಿರ್‌ಕಾಕನ ಗದ್ದೆ ಏರಿ ತೋಡ್‌ಕರೆಂದ ಓಡ್ವ ಏಡಿಗಳ ಮಡಚಿದ ಕೊಡೇಲಿ ತುಂಬಿಕಂಡ್ ಮನೆವರೆಗೆ ತಂದ್ ಬಿಡುತ್ತಾ ಇದ್ದೊ. ಈ ಚೇಷ್ಟೆಗಳ್‌ಂದ ಕೊಡೇಲಿ ತೂತಗ ಬಿಡಿಸುಕಾಕನ ಆಕಾಶದ ವೈವಿಧ್ಯಮಯ ದರ್ಶನ ಆತಿತ್ತ್.

ಮಳೆಗೆ ಮುಂದೆ ಗುಡುಗು ಬಂದರೆ ಅಳುಂಬೆ ಏಳುದು ಗ್ಯಾರಂಟಿತೇಳ್ದು ನಮ್ಮ ಅಜ್ಜಂಗೆ ಗೊತ್ತಿತ್ತ್. ವರ್ಷ ವರ್ಷ ಅಳುಂಬೆ ಏಳ್ವ ಜಾಗ ನಮಗೆ ಗೊತ್ತಿದ್ದದೆ. ಗುಡುಗಿಕೆ ಸುರು ಆದಂಗೆ ಅಳುಂಬೆ ಹುಡಿಕಿಕೆ ಸುರು ಆದೆ. ಒಂದು ವೇಳೆ ಆಕಸ್ಮಿಕ ಇಲ್ಲರೆ ಅನಿರೀಕ್ಷಿತ ಅಗಿ ಅಳುಂಬೆ ಸಿಕ್ಕಿರೆ ಕೊಡೆನೇ ಅದರ ತುಂಬಿಸಿಕಣೆಕೆ ಒಳ್ಳೆದು. ಅಳುಂಬೆಲಿ ಸಣ್ಣ ಅಳುಂಬೆ ಸಿಕ್ಕಿರೆ ಹೆಪ್ಪು ಹೆಪ್ಪು ತೆಗ್ದ್ ಕೊಡೇಲಿ ತುಂಬಿಕಂಡ್ ತಂದ್ ಅಮ್ಮನ ಮಡಿಲಿಗೆ ಸುರಿತಾ ಇದ್ದೊ. ದಪ್ಪ ದಪ್ಪ ಅಳುಂಬೆ ಸಿಕ್ಕಿರೆ ಹಣ ಕೈ ಸೇರ್‌ದಷ್ಟು ಖುಷಿ ಬುಡಿ.

ಓಂಗೆಲ್ಲಾ ಬಳಕೆ ಆಗಿ ಕೊಡೆ ಕಡ್ಡಿ ಮುರ್ದ್, ಮುರ್ದ್ ಓರೆ ಕೋರೆ ಆಕನ ಸರಿಮಾಡಿಕೆ ನಮ್ಮ ಅಜ್ಜ ರೆಡಿಯಾಗಿದ್ದವೆ. ತುಂಬಾ ಸಣ್ಣದಾಗಿ ಗಮನಿಸಿಕಂಡ್. ಅದರೆಲ್ಲಾ ಜೋಡ್ಸಿ, ಸಲಿಗೆ ಕಟ್ಟಿ ಸೂಜಿನೂಲ್‌ಂದ ಹೊಲ್ದ್, 'ಲಾಯಿಕೆ ಇಟ್ಟುಕಣಿ ಇನ್ನು. ಮುಂದೆ ಮುರ್ದ್ ಹೋದರೆ ನನ್ನಿಂದ ಸರಿ ಮಾಡಿಕೆ ಆದುಲೆ'ತೇಳಿ ಗತ್ತ್‌ಂದ ಹೇಳ್ತ ಇದ್ದೊ. ಅದ್ದೂ ಮತ್ತೆ ಅವರ ಹಿಂದೆ ತಿರುಗಿ ತಿರುಗಿ 'ಹೊಲ್ದ್ ಕೊಡಿ, ಪ್ಲೀಸ್ ಸರಿಮಾಡಿಕೊಡಿ'ತೇಳಿ ಗೋಗರೆಯುವುದನ್ನ ಮಾತ್ರ ನಿಲ್ಲಿಸುತ್ತಾ ಇತ್ಲೆ. ಅಷ್ಟಕ್ಕೆ ನಮಗೆ ಬ್ಬೊಂಗೆ ಒಂದೊಂದು ಕೊಡೆ ಸ ಇರ್‌ತಿತ್ಲೆ. ಇಬ್ಬರಿಗೂ ಸೇರಿ ಒಂದು ಕೊಡೆ ಕೊಡುತ್ತಾ ಇದ್ದೊ. ಆಗ ಹೊಡೆತಿದ್ದ ಹಡಾರಿ ಮಳೆಗೆ ನಮ್ಮ ಮೈ ಅರ್ಧದಷ್ಟ್ ನೀರ್

ಕುಡಿತ್ತಾ ಇತ್ತ್. ಮಳೆ ನೆನ್ಸಿಕಂಡ್ ಹೆಕ್ಕಿದ ಮಾಪಿನ ಹಣ್ಣ್, ಕಾಡುಹಣ್ಣು ತಿಂದುಕಂಡ್ ಆ ಮಳೆ ನಮಗೆ ಲೆಕ್ಕಕ್ಕಿಲ್ಲಿತ್ತೇಳಿ ನಡೀತಾ ಇದ್ದೊ.

ಹಿಂದಿನ ಕಾಲದ ಅಜ್ಜಂದರ್ ಎಲ್ಲಿಗಾದ್ರು ಹೋಗಿ ಬಾಕನ ಕೊಡೆ ಮರ್ತ್ ಮಳೆಗೆ ಸಿಕ್ಕಿಕಂಡ್ ನೆನ್‌ಕಂಡ್ ಬಾಕನ ದೊಡ್ಡದೊಂದು ಬಾಳೆ ಎಲೆ ಇಲ್ಲರೆ ಅಗಲದ ಕೆಸದ ಎಲೆನ ತಲೆಮೇಲೆ ಹಿಡ್ಡ್‌ಕಂಡ್ ಆರಾಮಾಗಿ ನಡ್ಡ್‌ಕಂಡ್ ಬರ್ತಾ ಇದ್ದೊ. ತೋಟಲಿ, ಗದ್ದೆಲಿ ಕೆಲ್ಸ ಮಾಡುವವು ಕೂಡ ಕೊಡೆಗ ಬಣ್ಣ ಬಣ್ಣದ ಪ್ಲಾಸ್ಟಿಕ್‌ನ ಟೊಪ್ಪಿಯಂಗೆ ಹೊದಿಕೆನ ತಲೆಗೆ ಸಿಕ್ಕಿಸಿಕಂಡ್ ಕೆಲ್ಸ ಮಾಡುದರ ನೋಡ್ರೆ ಹಸಿರು ಗಿಡಲಿ ಅಲ್ಲಲ್ಲಿ ಬಣ್ಣ ಬಣ್ಣದ ದುಂಬಿ ಕುದ್ದಂಗೆ ಕಂಡದೆ. ನೋಡ್ರೆ ಕಣ್ಣು ತುಂಬಿದೆ. ಪ್ರತಿ ಮಳೆಗಾಲಲಿ ಮನೆಗಳಲ್ಲಿ ತಿಂಬಕ್ಕೇನ್ ಬರ ಇಲ್ಲೆ. ಮಾಪಿನ ಹಣ್ಣ್, ಹಲಸಿನ ಹಣ್ಣ್ ಬೇಕಷ್ಟು ಸಿಗ್‌ತಿತ್ತ್. ಅದರ್‍ಲೇ ನಮ್ಮ ಹೊಟ್ಟೆ ತುಂಬಿತಿತ್ತ್. ಅಡಿಗೆ ಮನೇಲಿ ಅಡಿಗೆಗೆ ಬೇಕಾದ್ದ್ ಸೊಪ್ಪು, ಹಲಸಿನ ಬೀಜ, ಕಾಡುಮಾವು, ಕಣಲೆ ತೇಳಿ ಊಟ ರುಚಿ-ರುಚಿಂದ ಚಪ್ಪರಿಸಿ ಕಂಡ್ ತಿಂಬಕೆ ಬೇಕಷ್ಟು ಸಾರಿಗೆ ಸಿಗ್‌ತಿತ್ತು. ಇದರೆಲ್ಲಾ ಬಳಸಿಕಂಡ್ ತಾಳ್ಮೆಂದ ತಯಾರ್ ಮಾಡ್‌ತ್ತಿದ್ದ ಅವ್ವ ಮತ್ತೆ ಅಮ್ಮ.. ಈಗ ನಮಗೆ ಇದೆಲ್ಲಾ ಸಿಗುದು ಸ್ವಲ್ಪ ಕಷ್ಟ. ಸಿಕ್ಕಿರೆ ಸ ರುಚಿ ರುಚಿಂದ ತಿಂಬಕೆ ಮಾಡಿಕೆ ವ್ಯವದಾನ ಇಲ್ಲೆ? ಕೆಲ್ಸ ಇಲ್ಲದೆ ಆಕಾಶ ನೋಡಿಕಂಡ್ ಕುದ್ದುಕಂಡ್ ಕೊಡೆ ರಿಪೇರಿ ಮಾಡ್ವ ಅಜ್ಜಂದಿರಿಗೀಗ ಪುರುಸೊತ್ತೆ ಇಲ್ಲೆ, ಪ್ರತಿ ಸಂತೆಲಿ ಕೊಡೆ ರಿಪೇರಿ ಮಾಡಿಕೆ ಹಾಜರಾಗಿದ್ದವೆ. ರಿಪೇರಿ ಚಾರ್ಜ್ ಮಾತ್ರ ಭಾರೀ ದುಬಾರಿ ಆಗಿದ್ದದೆ. ಚೌಕಾಸಿ ಮಾಡ್ವ ಗಿರಾಕಿಗೇನು ಗೊತ್ತಿದ್ದದೆ. ಇವರ ಕೆಲ್ಸ ಮಳೆಗಾಲಲಿ ಮಾತ್ರತೇಳಿ. ಬೇರೆ ದಿನಲಿ ರಸ್ತೆ ಬದಿಲಿ ಕೊಡೆ ರಿಪೇರಿತೇಳಿ ಹರ್ದ ಹಳೇ ಕೊಡೆ ಇಸಿಕಂಡು ಕುದ್ದರೆ ಗಿರಾಕಿಗ ತನ್ನ ಕೊಡೆ ಲಾಯಿಕ ಅರಳುತ್ತುಟ್ಟೊತೇಳ್ವ ಆತಂಕ! ಅದೆಷ್ಟು ಹೊಸ-ಹೊಸ ಮಾದರಿಯ ಆಧುನಿಕತೆ ಕಂಡರೂ ಕೊಡೆ ಕೇಳ್‌ಕಾಕನ ಮೊದ್ಲು ಕಪ್ಪು ಕೊಡೆಯಷ್ಟೆ ಸಿಗುತ್ತಿದ್ದದು. ಹಿಂಗೆ ಕಪ್ಪು ಕೊಡೆಗಳೇ ಕೊಡೆಯ ಮೂಲ ಸ್ವರೂಪತೇಳಿ ದೃಢೀಕರಿಸಿ ಬಿಟ್ಟುಟು. ಬಿಳಿ ಹಾಳೆಗೆ ಕಪ್ಪು ಅಕ್ಷರಗ ಅಥವಾ ಚಿತ್ರ ಹಂಗೆ ಲಕ್ಷಣ ಉಟ್ಟೊ ಹಂಗೆ ಇಳೆಗಿಳಿಯುವ ಹನಿಯ ಕಲರವಕ್ಕೆ ಮದ್ದಳೆಯಾಗುವ ಕಪ್ಪು ಕೊಡೆಗಳೇ ಲಾಯಿಕ. ರಭಸಂದ ಬೀಸುವ ಗಾಳಿಗೆ ಹಾರಿಹೋಗುವ ಕೊಡೆಗ, ಛತ್ರಿ ಮಡಿಚಿ ಬಿಡಿಸಿಕೆ ಆಗದೆ ಇರ್ವ ಕೊಡೆಗಸ ಉಟ್ಟು. ಹಿಂಗೆ ಕೊಡೆಂದ ಸಾಕಷ್ಟು ಪ್ರಮೇಯ ಹಲವರ ಗಮನಕ್ಕೆ ಬಂದುಟ್ಟು. ಮಳೆ ಬಿದ್ದುಕಂಡಿದ್ದರೂ ಇಟ್ಟ ಸ್ಥಳಲಿ ಮರ್ತ್‌ಬುಟ್ಟು ಹೋದ ನಮ್ಮಿಂದ ದೂರಾದ ಕೊಡೆಗಳೆಷ್ಟೋ ಒಳೋ. ಏನಾದರಾಗಲೀ.. ಕೊಡೆಗ ಮಾತ್ರ ಮಳೆ ಹನಿ ಹಾಕಿಕಂಡ್ ಜೋರಾಗಿ ಬಾಕನ ಅದರ ಸ್ಪರ್ಶಕ್ಕೆ ನಾಚಿಕಂಡ್ ಮೊಗ್ಗಾಗದೆ ಹಿಗ್ಗಿ ಅರಳಿಕಂಡ್ ನಳನಳಿಸುತ್ತಾ ಕಂಡದೆ.

✍ ಎಂ.ವಿ. ಮೋಹನ್ ಕುಮಾರ್
ಭದ್ರಗೋಳ ಗ್ರಾಮ ಮತ್ತು ಅಂಚೆ
ತಾರಿಕಟ್ಟೆ, ತಿತಿಮತಿ

## ಯುವ ಪ್ರತಿಭೆ

# ಭಾರತೀಯ ಸೇನೆಲಿ ಕ್ಯಾಪ್ಟನ್ ಲಿಶ್ಮಿತಾ ಅಯ್ಯಪ್ಪ ಬಾರಿಕೆ



ಕ್ಯಾಪ್ಟನ್ ಲಿಶ್ಮಿತಾ ಅಯ್ಯಪ್ಪನವು ಮಡಿಕೇರಿಯ ಕಾವೇರಿ ಬಡಾವಣೆ ನಿವಾಸಿ ಬಾರಿಕೆ ರತ್ನಶೀಲಾ ಮತ್ತೆ ಅಯ್ಯಪ್ಪನವರ ಎರಡನೆ ಮಗಳು. ಹುಟ್ಟಿದ 10ನೇ ತಿಂಗಳಲ್ಲೆ 'ಕಲ್ಪತ' ಶಿಶುಪಾಲನೆಯಲ್ಲಿ ತಮ್ಮ ಜೀವನದ ಮೊದಲ ಮೆಟ್ಟಲೇರಿ ಶಿಸ್ತುಬದ್ಧ ಬೆಳವಣಿಗೆಯನ್ನ ಶುರು ಮಾಡ್ಲೊ. ಮುಂದೆ ಸಂತ ಜೋಸೆಫ಼ ಸ್ಕೂಲ್‌ಲಿ ಎಲ್.ಕೆ.ಜಿ ಯಿಂದ ಹತ್ತನೆಯ ತರಗತಿವರೆಗೆ (ಎನ್.ಸಿ.ಸಿ. ತರಭೇತಿಯೊಂದಿಗೆ) ವಿದ್ಯಾಭ್ಯಾಸ ಮುಗಿಸಿದೊ. ಅಲ್ಲಿಂದ ಮಂಗಳೂರಿನ ಎಕ್ಸ್‌ಪರ್ಟ್ ಕಾಲೇಜಿಲಿ ಪಿಯುಸಿ ಮಾಡಿ ಬೆಂಗಳೂರಿನ ಎಸ್.ಎಂ.ವಿ.ಟಿ. ಕಾಲೇಜಿಲಿ ಸಿವಿಲ್ ಇಂಜಿನಿಯರಿಂಗ್ ಪದವಿನ ಗಳ್‌ಸಿದೊ. ನಂತರ ಬೆಂಗಳೂರಿನ ನಾಗಾರ್ಜುನ ಕಂಪೆನಿಲಿ ಕೆಲಸಕ್ಕೆ ಸೇರ್‌ಕಂಡೊ. ಕೆಲಸಲಿ ಇರ್ಕಾಕನೆ ಭಾರತೀಯ ಸೇನೆಗೆ ಲೆಫ಼್ಟಿನೆಂಟ್ ಹುದ್ದೆಗೆ ಆಯ್ಕೆ ಆಗಿ ಮದ್ರಾಸ್‌ಲಿ 11 ತಿಂಗಳ ತರಬೇತಿನ ಮುಗಿಸಿದೊ. ಅಲ್ಲಿಂದ ಜಾರ್ಕಂಡ್ ರಾಜ್ಯದ ರಾಂಚಿಲಿ ಸುಮಾರು ಎರಡುವರೆ ವರ್ಷ ಕೆಲಸ ಮಾಡ್ಯೊಳೊ. ನಂತರ ಕ್ಯಾಪ್ಟನ್ ಆಗಿ ಬಡ್ತಿ ಪಡ್ದೊ. ಜೂನಿಯರ್ ಸಂಗೀತ ಅಭ್ಯಾಸ ಮಾಡಿ ಹಾಡ್‌ಗಾರಿಕೆಲಿ, ಶಾಲೆಲಿ ನಡೆವ ಭಾಷಣ ಸ್ಪರ್ಧೆಲಿ ಭಾಗವಯ್‌ಸಿಳೊ. ಸಣ್ಣದರಿಂದಲೇ ಎನ್.ಸಿ.ಸಿ. ಗೆ ಸೇರಿ ದೇಶಸೇವೆ ಮಾಡಕುತ ಆಸೆ ಇವ್ರಕೆ ಇತ್ತು. ಇಂದ್ ಅವರ ಆಸೆ ಈಡೇರ್‌ದಂಗೆ ಆಗುಟ್ಟು.

ಸಣ್ಣದರ್‌ಂದ ಯಾವುದೇ ಆಟೋಟಗಳ್‌ಲಿ ಸೇರದಿದ್ದರೂ ಸೇನೆಯ ತರಬೇತಿ ಸಮಯಲಿ ಎಲ್ಲಾ ಕಷ್ಟಕರ ಸಂಗತಿಗಳ್‌ನ ಚಲಬಿಡದೆ ಮಾಡ್ಯೊಳೊ. ಮನ್‌ಸ್ಸಿದ್ದರೆ ಯಾವುದೇ ವಿಷಯ ಕಷ್ಟ ಇಲ್ಲೆತ ತೋರಿಸಿಕೊಟ್ಟೊಳೊ. ಸದ್ಯ ಭಾರತೀಯ ಸೇನೆಲಿ ಸೇವೆ ಮಾಡ್‌ತ್ತಿರುವ ಗೌಡ ಜನಾಂಗದ ಏಕೈಕ ಮಹಿಳೆ ಇವು ಇವರ ಈ ಸಾಧನೆ ಎಲ್ಲಾ ಗೌಡ ಜನಾಂಗದ ಗೂಡೆಗಳೆಗೆ ಸ್ಪೂರ್ತಿಯಾಗಿ ಸೈನ್ಯಕ್ಕೆ ಸೇರುವಂತಾಗಲಿ ಇವು ಸೇನೆಲಿ ಇನ್ನೂ ದೊಡ್ಡ ಹುದ್ದೆನ ಪಡ್ದ್ ನಮ್ಮ ಜನಾಂಗದ ಕೀರ್ತಿ ಪತಾಕೆನ ಹಾರಿಸಿಕೆ ಭಗವಂತ ಎಲ್ಲಾ ರೀತಿಂದ ಅನುಗ್ರಹಿಸಲಿ ಅಂತ ಹಾರೈಸೊನ.

**ಸಂಗ್ರಹ – ಚೊಕ್ಕಾಡಿ ಪ್ರೇಮ ರಾಘವಯ್ಯ**
ಟಿ. ಜಾನ್ ಲೇಔಟ್, ಮಡಿಕೇರಿ
ಮೊ. : 9900992360

## ವ್ಯಕ್ತಿ ಪರಿಚಯ

# ಸಮಾಜ ಸೇವಾ ಧುರೀಣ ಶ್ರೀ ತೋಟಂಬೈಲು ಎಂ.ನಾಣಯ್ಯ B.Sc., LL.B.

ಕಾವೇರಿ ನದಿ ತೀರದ ಪ್ರಕೃತಿಯ ರಮ್ಯ ನೆಲೆ ಕೊಡಗ್ ಜಿಲ್ಲೆನ ಸಿದ್ದಾಪುರದ ಕುರುಬರ ಮೊಟ್ಟೆ ಎಸ್ಟೇಟ್‌ನ ಮಾಲೀಕರಾದ ಶ್ರೀ ಟಿ.ಎಂ. ನಾಣಯ್ಯನವು ಸರಳ ಗಣ್ಯವ್ಯಕ್ತಿಯಾಗಿದ್ದೊವು. ಕಾಫಿ. ಕಿತ್ತಳೆ ಮೆಣಸ್. ಯಾಲಕ್ಕಿಗೂ ಹೆಸರಾದ ಕೊಡಗ್‌ಲಿ ಇವು ಸಮಾಜ ಸೇವೆಲಿ ಹೆಸ್‌ರ ಪಡ್ಕಂಡೊವು. ವೀರ ಯೋಧರ್‌ನ ದೇಶ ಪ್ರೇಮಿಗಳ್‌ನ ರಾಷ್ಟ್ರಕ್ಕೆ ಅರ್ಪಿಸಿದ ಕೀರ್ತಿ ಕೊಡಗ್ ಜಿಲ್ಲೆದ್. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಹೊರತರ್‌ವ ತ್ರೈಮಾಸಿಕ ಹಿಂಗಾರ ಪತ್ರಿಕೆಲಿ ಹಿರಿಯರ ನೆನಪ್‌ನ ಲೇಖನ ತರ್‌ವ ಈ ಹೊತ್‌ಲಿ. ಸುಮಾರ್ ಒಂದುವರ್ ಲಕ್ಷದಷ್ಟಿರುವ ಕೊಡ್ಗ್ ಗೌಡ ಜನಾಂಗದ ಮುಖ್ಯವಾಹಿನಿಲಿ ಪ್ರೊಂದಾಗಿ ಜಿಲ್ಲೆನ ಸಂಪತ್ತ್ ಸಮೃದ್ಧಿಗಾಗಿ. ಸಾಮಾಜಿಕವಾಗಿ. ರಾಜಕೀಯವಾಗಿ ಸೇವೆ ಮಾಡ್‌ದ ಹಿರಿಯೊವ್‌ರ ಜನಾಂಗದ ಸೇವೆ ಬಹು ಮುಖ್ಯ ಪಾತ್ರ ವಹಿಸುಟು. ಅದರ್‌ಲಿ ಬಂದವೆ ಗೌಡ ಸಮಾಜಲಿ ಸುಮಾರ್ ಮೂವತ್ತು ವರ್ಷ ಸೇವೆ ಸಲ್ಲಿಸಿದ ಶ್ರೀ ತೋಟಂಬೈಲು ಎಂ. ನಾಣಯ್ಯನವು.



ನಾಣಯ್ಯನವರ ಅಪ್ಪ ಶ್ರೀ ತೋಟಂಬೈಲು ಮಾದಪ್ಪನವು ಇವು ಹೆಸರಾಂತ ಕಾಫಿ ಬೆಳೆಗಾರರ್. ಅರಣ್ಯ ಇಲಾಖೆಲಿ ರೇಂಜರ್ ಆಗಿ ನಿವೃತ್ತಿ ಆದಮ್ಯಾಲೆ ಸಿದ್ದಾಪುರ ಪ್ರೌಢಶಾಲೆಯ ಸ್ಥಾಪಕ ಅಧ್ಯಕ್ಷರಾಗಿದ್ದೊ. ಸಿದ್ದಾಪುರ ಟೌನ್ ಸಹಕಾರ ಸಂಘದ ಅಧ್ಯಕ್ಷರಾಗಿ ಎರಡ್ ಸಲ ಸೇವೆ ಸಲ್ಲಿಸ್ಯೊಳೊ. ಕೂರ್ಗ್ ರೆಡ್‌ಕ್ರಾಸ್ ಸಂಸ್ಥೆಲಿ ಉಪಾಧ್ಯಕ್ಷರಾಗಿ ಸೇವೆ ಮಾಡ್ಯೊಳೊ. ಹಂಗೆ ದಾನ ಧರ್ಮಲಿ ಅದರ್‌ಲೂ ಮನೆಗೆ ಬರೊವುಕೆ ಸಹಾಯ ಹಸ್ತ ಸಿದ್ಧ ಇರ್‌ತಿತ್ತ್.

1938ರ್‌ಲಿ ಜನಿಸಿದ ನಾಣಯ್ಯನವು ಮೈಸೂರ್‌ನ ರಾಮಕೃಷ್ಣಾಶ್ರಮಲಿ ಓದಿ ಮುಂದೆ ಬೆಂಗಳೂರ್‌ನ ಸೆಂಟ್ರಲ್ ಕಾಲೇಜ್‌ಲಿ ಬಿ.ಎಸ್ಸಿ. ಪದವಿ ಪಡ್ದೊ. ಕನ್ನಡದ ಹೆಸರಾಂತ ಸಾಹಿತಿಗಳಾದ ಜಿ.ಪಿ. ರಾಜರತ್ನಂ ಎಸ್.ವಿ. ಪರಮೇಶ್ವರ ಭಟ್ ಅವರ್‌ನ ಆಗಾಗ ಸ್ಮರಿಸೊವು ಶ್ರೀ ನಾಣಯ್ಯನವು. ಹಾಕಿ ಇವರ ಮೆಚ್ಚಿನ ಆಟ ಬೆಂಗಳೂರ್‌ನ ಸರ್ಕಾರಿ ಲಾ ಕಾಲೇಜ್‌ಲಿ ಓದ್ತಾಯಿರ್‌ಕನ ಹಾಕಿ ಕ್ಯಾಪ್ಟನ್ ಆಗಿದ್ದೊ. ಹೆಸರಾಂತ ಹಿರಿಯ ವಕೀಲ ಎಸ್.ಜಿ. ಸುಂದರ ಸ್ವಾಮಿ ಅವರ ಕೈ ಕೆಳ್‌ಗೆ ಹಂಗೆ ಮಡಿಕೇರಿಲಿ ಇವರ ಕುಟುಂಬದ ಚಂಗಪ್ಪ ವಕೀಲರ್ ಇವರ ಹತ್ರಸ ಪ್ರಾಕ್ಟೀಸ್ ತಕಂಡೊಳೊ.

ಇವರ ಅಪ್ಪ ತೀರಿಹೋದಮ್ಯಾಲೆ ನ್ಯಾಯಾಂಗ ಕ್ಷೇತ್ರಲಿ ಮುಂದುವರಿಯಕೆ ಆತ್‌ಲೆ. 1908ರ್‌ಲಿ ಕೊಡಗ್ ಗೌಡ ವಿದ್ಯಾಸಂಘದ ಸ್ಥಾಪಕ ಅಧ್ಯಕ್ಷರಾದ ಕುಂಬಗೌಡನ ಕುಶಾಲಪ್ಪನವರ ಮನೆತನದ ಮುದ್ದಪ್ಪನವರ ಮಗಳು ಶಾರದಮ್ಮನವರ್‌ನ 1967ರ್‌ಲಿ

ಮೊಮವೆ ಆದೊ. ಅವು ಮನೆತನದ ಏಳಿಗೆಗಾಗಿ ಪತಿಯೊಟ್ಟಿಗೆ ಶ್ರಮಿಸಿ ತುಂಬು ಜೀವನ ನಡೆಸಿದ ಗೃಹಿಣಿ. ಸಿದ್ದಾಪುರ ಲಯನ್ಸ್ ಕ್ಲಬ್‌ನ ಮಹಿಳಾ ವಿಭಾಗಲಿ ಅಧ್ಯಕ್ಷೆಯಾಗಿ ದುಡ್‌ದೊಳೊ. ಇವ್ರುಕೆ ಇಬ್ಬೊರು ಗಂಡ್ ಮಕ್ಕ, ಒಬ್ಬ ಮಗಳ್. ಮೂರ್ ಜನ ಮಕ್ಕ ವಿದ್ಯೆ ಬುದ್ಧಿಲಿ ಮುಂದೆ ವಳೊ. ಹಿರಿಯೊವು ಡಾ। ದೀಪಕ್ ಡೆಂಟಿಸ್ಟ್ ಆಗಿ ಬೆಂಗಳೂರ್‌ಲಿಯಿದ್ದರೆ ಎರಡನೆ ಮಂಜ ದರ್ಶನ್ ಪದವಿ ಮುಗ್‌ಸಿ ಅಪ್ಪನ ಹೆಗ್‌ಲ್‌ಗೆ ನಿತ್ತದ್ ಕಾಣ್ತಾವಳೊ. ಮಗಳ್ ಶಿಲ್ಪತೇಳವು ಎಂ.ಎ. ಸೈಕಾಲಜಿ ಅಲ್ಲದೆ ಮಂಗಳೂರು ವಿಶ್ವವಿದ್ಯಾನಿಲಯಲಿ ಬಿ.ಎ. ಪದವಿಲಿ 4ನೆ ರ್‍ಯಾಂಕ್ ಪಡ್ದ್ ಕೊಡಗು ಗೌಡ ವಿದ್ಯಾಸಂಘದ ಪ್ರತಿಭಾ ಪುರಸ್ಕಾರ ಪಡ್ದದ್‌ತೇಳಿಕೆ ಕುಸಿ ಆದೆ. ಶ್ರೀಮತಿ ಶಾರದಮ್ಮನವರ ತಂಗೆನ ಮೊಮವೆ ಆದವು ನಂಜಯ್ಯನ ಮನೆ ಸಣ್ಣಯ್ಯ ಪಟೇಲರ ಕುಡಿ ಶ್ರೀ ದೇವಿಪ್ರಸಾದವು. ಇಂತ ಮೂಲ ಹಿನ್ನಲೆಯಿರ್‌ವ ಟಿ.ಯಂ. ನಾಣಯ್ಯನವು ಮತ್ತೆ ಶ್ರೀ ದೇವಿ ಪ್ರಸಾದವು ಜನಾಂಗ ಬಾಂದವ್ರುಕೆ ತುಂಬಾ ಬೇಕಾದವ್ರು.

ಶ್ರೀ ನಾಣಯ್ಯನವರ ಅಣ್ಣ ಬೆಳ್ಯಪ್ಪನವು ಲಯನ್ ಡಿಸ್ಟ್ರಿಕ್ಟ್ ಗೌರ್ನರ್ ಆಗಿದ್ದೊ. ತಮ್ಮ ಮುದ್ದಪ್ಪ ಸೌದಿ ಅರೇಬಿಯಾಲಿ ಕಣ್ಣಿನ ತಜ್ಞರಾಗಿ ರಕ್ಷಣಾ ಇಲಾಖೆಲಿ ಸೇವೆ ಸಲ್ಲಿಸ್ತೊಳೊ. ಮತ್ತೊಬ್ಬ ತಮ್ಮ ಮೋಹನ್ ಇಂಜಿನಿಯರ್ ಆಗಿದ್ದ್ ಎಸ್ಟೇಟ್‌ನ ವ್ಯವಹಾರ ನೋಡಿಕೊಳ್ತಾವಳೊ.

ಶ್ರೀ ನಾಣಯ್ಯನವರ ಸಮಾಜ ಸೇವೆ ಬಹು ತರಲಿವುಟ್ಟು. 1970 ರ್‌ಂದ ಸಿದ್ದಾಪುರ ಪ್ರೌಢಶಾಲೆಯ ಆಡಳಿತ ಮಂಡಳಿಲಿ ಹನ್ನೆರಡ್ ವರ್ಷ ಉಪಾಧ್ಯಕ್ಷರಾಗಿದ್ದ್ 1982ರ್‌ಂದ ಅಧ್ಯಕ್ಷರಾಗಿ ಮುಂದುವರ್ದೊ. ಈ ಶಾಲೆ ರಜತ ಮಹೋತ್ಸವ ಮಾಡಿಕೊಂಡುಟು. 1976ರ್‌ಂದ ಮೈಸೂರ್‌ಲಿ ಕೊಡಗು ಗೌಡ ವಿದ್ಯಾರ್ಥಿ ನಿಲಯದ ಖಜಾಂಚಿಯಾಗಿದ್ದೊವು. ಆ ಸಂದರ್ಭ ವಿದ್ಯಾರ್ಥಿ ಭವನ ಆತ್. 1980ರ್‌ಂದ 88 ಕ್ಕೆ ಮುಟ್ಟ ಕಲ್ಯಾಣ ಮಂಟಪ ಕಟ್ಟಡ ಸಮಿತಿ ಅಧ್ಯಕ್ಷರಾಗಿದ್ದ್ ಈ ಅವಧಿಲಿ ಕಟ್ಟಡ ನಿರ್ಮಾಣ ಆತ್. ಹಂಗೆ ಜಿಲ್ಲೆನ ಹಲವಾರ್ ಗೌಡ ಕಲ್ಯಾಣ ಮಂಟಪಗ ಗೌಡ ಸಮಾಜಗ ಇವರ ಅಧಿಕಾರವಧಿಲಿ ಆತ್. ಈ ಕೆಲ್ಸಕ್ಕೆಲ್ಲಾ ಸ್ಫೂರ್ತಿ ಅವರ ಅಪ್ಪರಾದ ಹಿರಿಯವರ ಆಶೀರ್ವಾದ ಮತ್ತೆ ಸಮಿತಿ ತಂಡದ ಸ್ಫೂರ್ತಿತೇಳಕ್. ಯಾವುದೇ ಕೆಲ್ಸಕ್ಕೂ ಸಮಿತಿ ತಂಡದ ಸಹಕಾರ ಮುಖ್ಯ ಆಗಿದ್ದದೆ.

1985 ರ್‌ಲಿ ಸುಳ್ಯಲಿ ಗೌಡ ಸಮ್ಮೇಳನ ನಡೆಕಾಕನ ಕೊಡಗ್‌ಂದ ಭಾರಿ ಸಂಕೆಲಿ ಹೋಗುವ ಕೆಲ್‌ಸ ಆತ್. ಆಗ ಶ್ರೀಶ್ರೀಶ್ರೀ ಬಾಲಗಂಗಾಧರ ಮಾಸ್ವಾಮಿಯವು ಉದ್ಘಾಟನೆ ಮಾಡ್ದೊ. ಹಿಂಗೆ ಅವರ ಆಶೀರ್ವಾದ ದೇವಿಪ್ರಸಾದರ್ ಮತ್ತೆ ನಾಣಯ್ಯನವರ ಮೂಲಕ ಜನಾಂಗಕ್ಕೆ ಲಭಿಸುಟ್ಟು.

ಕೊಡಗು ಮತ್ತು ದಕ್ಷಿಣ ಕನ್ನಡದ ಗೌಡ ಅಭಿವೃದ್ಧಿ ಸಂಘಲಿ 5 ವರ್ಷ ಅಧ್ಯಕ್ಷರಾಗಿದ್ದೊ. ಸಿದ್ದಾಪುರ ಲಯನ್ಸ್ ಕ್ಲಬ್‌ಲಿ ಎರಡ್ ಸಲ ಅಧ್ಯಕ್ಷರಾಗಿ ಆಯ್ಕೆ. ಲಯನ್ಸ್ ಕ್ಯಾಬಿನೆಟ್ ಸದಸ್ಯರಾಗಿ 1981ರ್‌ಂದ 89ಕ್ಕೆ ಮುಟ್ಟ ಸೇವೆ ಗೌರವ ಹೊಂದ್ದೊಳೊ ಇವು.

ಲೋಕ ನಾಯಕ ಜಯ ಪ್ರಕಾಶ ನಾರಾಯಣರ ಸಂಪೂರ್ಣ ಕ್ರಾಂತಿಲಿ ಸಕ್ರಿಯವಾಗಿ ಭಾಗವಹಿಸಿದ್ದ ನಾಣಯ್ಯನವು ಒಂದೆರಡ್ ವರ್ಷ ಕೊಡಗ್ ಜಿಲ್ಲಾ ಜನತಾಪಕ್ಷದ ಖಜಾಂಚಿಯಾಗಿ ಕಾರ್ಯನಿರ್ವಹಿಸೊಳೊ.

ಯಾವ್ದೇ ಕ್ಷೇತ್ರಕ್ಕೆ ಕೈ ಹಾಕಿರೂ ನಿಷ್ಠೆಂದ ಸೇವೆ. ಸರಳ ಸೌಜನ್ಯವ್ಯಕ್ತಿ ಸಮಾಜದ ಸಮಾರಂಭಗಳ್‌ಲಿ ಎಂದೂ ಎತ್ತರಕ್ಕೆ ದನಿ ಏರ್ಸಿತ್‌ಲೆ. ಪದವಿ ಪುರಸ್ಕಾರ ಹುಡ್‌ಕಿಕಂಡ್ ಬಂದರೂ ಸಮಾಜಕ್ಕೆ ಹೆಚ್ಚಿನ ಸೇವೆಗಾಗಿ ಹಾರೈಸ್‌ತಿದ್ದೊ. 2003ರ್‌ಲಿ ಕೊಡಗು ಗೌಡ ಫೆಡರೇಶನ್‌ನ ಸ್ಥಾಪಕಾಧ್ಯಕ್ಷರಾಗಿ ಕಾರ್ಯನಿರ್ವಹಿಸಿದೊ.

ಸಂಘಟನೆ ಸಮೃದ್ಧಿಗಾಗಿ ಕೊಡಗ್ ಗೌಡರಾದ ನಮ್ಮ ಗುರುತು ಎಸ್ಟೆ ಮುಖ್ಯತೇಳ್ವೊರ್‌ನ ಕತ್ತಿ ಕೋವಿ ಕುಲದೇವ್ರ ಗುರುತು ಸಂಕೇತನ ಇವು ಅಂಗೀಕರ್‌ಸಿ ಒಪ್ಪಿ ಗೌಡ ಸಮಾಜದ ಗ್ವಾಡೆಲಿ ಕೆತ್ತಿಸ್ವೊಳೊ. ಇವು ಇತ್ತೀಚೆಗೆ ದಿವಂಗತರಾದದ್ದ್ (8.8.2020) ಜನಾಂಗಕ್ಕೆ ತುಂಬಲಾರದ ನಷ್ಟ.

**ಲೇಖಕಿಯಾಗಿ ನಾನ್ ಇವರ ಬಗ್ಗೆ ಒಂದೆರಡ್ ಮಾತ್ ಹೇಳೊಕು, ಅದ್‌ತೇಳ್ರೆ:**

ಕೊಡಗು ಗೌಡ ಸಮಾಜಲಿ 18-6-1991ರ್‌ಂದ 2003ರವರೆಗೆ ಅಧ್ಯಕ್ಷರಾಗಿ ಟಿ.ಯಂ. ನಾಣಯ್ಯನವ್ ಕೆಳಗೆನ ಗೌಡ ಸಮಾಜಕ್ಕೆ ದೂರದ ಸಿದ್ದಾಪುರದ ಕುರುಬರ ಮೊಟ್ಟೆ ಎಸ್ಟೇಟ್ ಅಲ್ಲಿಂದ ಬರ್ತಿದ್ದೊ. ಅವು ಕನ್ನಡ ಭಾಷೆನ ಮಾತಾಡೊವು ಅರೆಭಾಷೆ ಅಕಾಡೆಮಿನ 2ನೇ ಸಮಿತಿ ಅಧ್ಯಕ್ಷರಾದ ಕೊಲ್ಯದ ಗಿರೀಶ್‌ನವರ ಸ್ವಂತ ಸಂಬಂದಿನೂ ಹೌದು. ಕೊಡಗು ಗೌಡ ವಿದ್ಯಾಸಂಘದ ಅಡಿಲಿ 1997ಕ್ಕೆ ಕೊಡಗು ಸಂಗಾತಿ ಪಾಕ್ಷಿಕ ಪತ್ರಿಕೆ ಹುಟ್ಟಿತ್. 3-11-97ಕ್ಕೆ ಮಹಿಳಾ ಒಕ್ಕೂಟದ ರಚನೆ ಆತ್. ಒಟ್ಟಿಗೆ 7-11-97ಕ್ಕೆ ಸಾಂಸ್ಕೃತಿಕ ಅಕಾಡೆಮಿತೇಳಿ ರಚನೆ ಆತ್. ಈ ಮೂರು ವಿಭಾಗದವು ಸಂಘಟನೆ, ಕಲೆ, ಸಂಸ್ಕೃತಿ ಸಾಹಿತ್ಯನ ಕೊಡ್ಗ್‌ನ ಉದ್ದಗಲ ಆಕಾಶವಾಣಿ ಮೂಲಕ ಪತ್ರಿಕಾ ಮಾಧ್ಯಮ ಮೂಲಕ, ಹಂಗೆ ಸಂಘಟನೆ ಮೂಲಕ ಮಾಡ್ತ ಕೆಲಸನ ಇವು ಬಾರಿ ಮೆಚ್ಚಿದವು.

ಇದೇ ಸಂದರ್ಭಲಿ ನಾನ್ ಹಸೆಮಣೆ ಪುಸ್ತಕ ಬರ್ದ್ ಮುನ್ನುಡಿ ಬರ್‌ಸಿಕೆ ಗೌಡ ಸಮಾಜಕ್ಕೆ ಹೋಕಾಕನ ಅವು ನಾವೇ ಪ್ರಕಟಿಸುವೆತೇಳ್ದೊ. ಕೊನೆಗಳಿಗೆಲಿ ನಾಣಯ್ಯನವು ಮತ್ತೆ ಕರ್ಣಯ್ಯನ ವಿಶ್ವನಾಥ ಇವಿಬ್ಬರೂ ಸೇರಿ ಮುನ್ನುಡಿ ಬರ್ದ್ ಕೊಟ್ಟೊ. ಇವು ಬರ್‌ದ ಮುನ್ನುಡಿಲಿ ಜನಪದತೇಳುವ ವಿಷಯಲಿ ಬಾರಿ ಲಾಯ್ಕಾಗಿ ಬರ್ದ್ ನನ್ನ ಆಶೀರ್ವದಿಸೊಳೊ.

ಹಸೆಮಣೆ ಮೂರು ಮುದ್ರಣ ಕಂಡತ್. ಜಿಲ್ಲೆ, ರಾಜ್ಯ, ಪ್ರಶಸ್ತಿಗ ಬಂದೊ. ಹಿಂಗಾಗಿ ನಾಣಯ್ಯನವು ಸದಾ ನನ್ನ ಮನಸ್‌ಲಿ ಹಸ್‌ರಾಗಿವಳೊ. ಗೌಡ ಜನಾಂಗದ ಪ್ರಮುಖರ ಸಭೆಲಿ ಗೌಡ ಮಹಿಳಾ ಒಕ್ಕೂಟದ ದ್ವಿತೀಯ ವಾರ್ಷಿಕೋತ್ಸವ ಸಮಾರಂಭಲಿ ಹಸೆಮಣೆ ಪುಸ್ತಕನ ಬಿಡುಗಡೆ ಮಾಡಿ ಗೌಡ ಜನಪದ ಸಂಗ್ರಹದ ಬಗ್ಗೆ ಬಾರಿ ಲಾಯ್ಕಾದ ಭಾಷಣದ ಮಾತ್‌ಗ ಪತ್ರಿಕೆಲಿ ಬಂದಿತ್ತ್.

ಇವರ ಬಗ್ಗೆ ಲೇಖನ ಮಾಡಿಕೆ ಹಿಂಗಾರ ತ್ರೈಮಾಸಿಕ ಪತ್ರಿಕೆನ ಸಂಪಾದಕರಾದ ಕೂಡಕಂಡಿ ದಯಾನಂದನವು ನಂಗೆ ಅವಕಾಶ ಕೊಟ್ಟದಕ್ಕೆ ಅವ್ರುಕೆ ನಾನ್ ವಂದನೆ ಸಲ್ಲಿಸಿನೆ.

**ಬೈತಡ್ಕ ಜಾನಕಿ ಬೆಳ್ಯಪ್ಪ**
ರೇಸ್‌ಕೋರ್ಸ್ ರಸ್ತೆ, ಮಡಿಕೇರಿ

# ರಂಗ ಮಾಂತ್ರಿಕ ಜೀವನ್ ರಾಂ ಸುಳ್ಯ



ಕಲೆ, ಸಾಹಿತ್ಯ ಹಂಗೆ ಸಂಸ್ಕೃತಿಂದ ಮಾತ್ರ ಒಂದ್ ಬಾಸೆನ ಬೆಳ್ಸಿಕೆ, ಉಳ್ಸಿಕೆ ಆದೆ. ಅದಲ್ಲೂ ರಂಗಭೂಮಿ ಒಂದ್ ಪ್ರಬಲ ಮಾಧ್ಯಮತ ಹೇಳ್ರೆ ತಪ್ಪಾಕಿಲೆ.

ಅಂತಹ ರಂಗಭೂಮಿನೇ ತನ್ನ ಉಸ್ರ್ ತೇಳುವಂಗೆ ಇರವು ರಂಗಮಾಂತ್ರಿಕ, ರಂಗದಶಾವತಾರಿ, ರಂಗಮಾಣಿಕ್ಯ ಬಿರುದ್‌ನ ಪಡ್ಕಂಡವು ಇವ್. ಕರ್ನಾಟಕದ ಸೃಜನಶೀಲ ರಂಗನಿರ್ದೇಶಕರ ಸಾಲ್‌ಲಿ ಕೇಳಿ ಬರುವ ಹೆಸ್ರ್ ಜೀವನ್ ರಾಂ ಸುಳ್ಯ.

ಅವರೊಟ್ಟಿಗೆ ನಡ್ಸಿದ ಸಂದರ್ಶನದ ಭಾವಾನುವಾದ:

ಪ್ರ : ಸರ್ ನಮಸ್ತೆ... ನಮ್ಮ ಸಮಸ್ತ ಬಾಂಧವ್ಕೆ ನಿಮ್ಮ ಸಣ್ಣ ಪರಿಚಯ ತಿಳ್ಸಿ?

ಉ : ನಮಸ್ತೆ ಎಲ್ಲವ್ಕೆ. ನಾ ಸುಜನಾ ಸುಳ್ಯ ಮತ್ತೆ ವಜನಾಕ್ಷಿ ಅವರ ಮಂಜ. ನನ್ನ ಬಾಲ್ಯನ ಬಾಳ ಸಾಂಕ್‌ತಾ ಇದ್ದೊ. ಕೆಲವ್ ಸಲ ನಾ ಸ ಪೇಪರ್ ಹಾಕಿಕೆ ಹೋಗ್ತಾ ಇದ್ದೆ. ಬಾಟಲಿಗಳ ಹೆರ್ಕಿ ಮಾರ್ತಾ ಇದ್ದೆ. ಅಲ್ಲಿ ಇಲ್ಲಿ ಕೆಲ್ಸ ಮಾಡಿ ಕಷ್ಟದ ಜೀವನ ಸಾಗ್ತಾ ಇತ್ತ್. ಚರ್ಚ್ ಶಾಲೆ, ಗಾಂಧಿನಗರ ಶಾಲೆಲಿ ವಿದ್ಯಾಭ್ಯಾಸ ಮುಗ್ಸಿ ನೀನಾಸಂಗೆ ಸೇರ್ದ ಮೇಲೆ ನನ್ನ ಜೀವನದ ದೆಸೆ ಬದಲಾತ್. ನಂಗೆ ಬೊದ್ಕುವ ಜ್ಞಾನನ ಕೊಟ್ಟದ್ ನೀನಾಸಂ.

ಪ್ರ : ನೀವ್ಗೆ ಈ ಬಣ್ಣದ ಬೊದ್ಕ್‌ನ ನಂಟ್ ಯಾಗಂದ?

ಉ : ನನ್ನ ಅಪ್ಪ ಯಕ್ಷಗಾನ ಮೇಳೆಲಿ ಹಾಸ್ಯ ಕಲಾವಿದ ಆಗಿದ್ದವ್. ಸುಮಾರ್ 36 ವರ್ಷ ಬೇರೆ ಬೇರೆ ಮೇಳಗಳಲ್ಲಿ ವೇಷ ಹಾಕಿಯೊಳೊ. ನನ್ನ ಬಾಲ್ಯ ಪೂರ್ತಿ ಕಳ್ದ್‌ದ್ ಯಕ್ಷಗಾನ ಚೌಕಿಲೇ. ಅಲ್ಲೇ ಬಣ್ಣದ ಲೋಕದ ಪರಿಚಯ ಆದ್. ಒಬ್ಬ ಮೊಂಯಿಸ ಬಣ್ಣ ಹಚ್ಚಿ ವೇಷ ಕಟ್ಟಿ ಒಂದ್ ಅದ್ಭುತ ಪಾತ್ರ ಆಗಿ ಮಾರ್ಪಾಟ್ ಆದರ್ನ ಕಣ್ಣಾರೆ ಕಂಡ ನಂಗೆ ರೋಮಾಂಚನ ಆಗ್ತಾ ಇತ್ತ್. ಅಪ್ಪ ಕೆಲವ್ ಸಲ ರಂಗಸ್ಥಳಕೆ ಎಳ್ಕಂಡ್ ಹೋಗ್ತಾ ಇದ್ದೊ. ಬೇಟೆಗಾರ ಆಗಿ, ದೇವೇಂದ್ರನ ಬಲ ಆಗಿ ಪಾತ್ರ ಮಾಡ್ತಾ ಇದ್ದೆ. ಅಲ್ಲಿಂದನೇ ನಂಗೆ ರಂಗಸ್ಥಳದ ಪರ್ಚಯ ಆದ್. ಮತ್ತೆ ಅಪ್ಪ ಚಾಕ್‌ಪೀಸ್‌ಂದ ರೇಡಿಯೊ, ಟೂತ್ ಪೇಸ್ಟ್‌ನ ಖಾಲಿ ಟ್ಯೂಬ್‌ನಿಂದ ವಿಮಾನ, ಮಡ್ಲಂದ ವಾಚ್, ಗಿರಿಗಿಟ್ಲೆ, ಮರದ ಚಕ್ರದ ಗಾಡಿಗ, ಮಣ್ಣ್‌ನ ಬಳ್ಸಿಕಂಡ್ ಚಿತ್ರಗಳ ಬುಡ್ಸ್ತಾ ಇದ್ದೊ. ಹಿಂಗೆ ಬೇರೆ ಬೇರೆ

ತರಹದ ವಿಚಾರಗ, ಕಲೆಗ ನಂಗೆ ಗೊತ್ತಾತ್.

ಮತ್ತೆ ಸುಳ್ಯ ಜಾತ್ರೆಲಿ ದೈವ ಕಟ್ಟುವವನ ಪೆಣ್ಣ್ ತೆಂಬೆರ ಹಿಡ್ಕಂಡ್ ಹೇಳ್ತಾ ಇದ್ದ ಪಾಡ್ದನಗ, ದೇವಸ್ಥಾನಗಳ್ಲಿ ನಡಿತಾ ಇದ್ದ ಹರಿಕಥೆ, ಭಜನೆ, ಮಾರ್ನಮಿ ಬಾಕನ ಹಾಕುವ ಹುಲಿ ವೇಸ, ಕೊರಗರ ಡೋಲು ಕುಣ್ತ, ಅವರ ಕೊಳಲ್ ಎಲ್ಲವೂ ನನ್ನ ಮೇಲೆ ಪ್ರಭಾವ ಬೀರ್ತ್.

ಈ ಹೊತ್ತ್‌ಲಿ ನಂಗೆ ಎಲ್ಲಿಸ ಜಾತಿ, ಮೇಲ್ ಕೀಳ್ ತೇಳುವಂತದ್ದ್ ಬಾತೇಲೆ. ಯಾಕೆ ಹೇಳ್ರೆ ಎಲ್ಲ ಜಾತಿ ಧರ್ಮನ ಮೀರ್ದ್ ಈ ರಂಗಭೂಮಿ.

ಪ್ರ : ಸರ್ ನೀವು ರಂಗಭೂಮಿ ಪಯಣನ ಎಲ್ಲಿಂದ, ಹೆಂಗೆ ಸುರು ಮಾಡ್ದರಿ?

ಉ : ನಾನ್ ನಿಜವಾಗಿ ಮನ್ಸ್‌ಇಟ್ಟ್ ನೀನಾಸಂಗೆ ಹೋದ್ ಅಲ್ಲ. ಅನಿವಾರ್ಯ ಕಾರಣಂದ ನಾನ್ ಅಲ್ಲಿಗೆ ಹೋಕೆ ಆತ್. ಕಾಲೇಜು ಬುಟ್ಟಂಗೆ ಒಂದ್ ಕಡೆ ಕೆಲ್ಸ ಮಾಡಿಕಂಡ್ ಇದ್ದೆ ಅಲ್ಲಿ ಒಂದು ಅಪಘಾತ ಆಗಿ ನನ್ನ ಬಲಗೈಗೆ ಪೆಟ್ಟಾತ್. ಅಲ್ಲಿಂದ ಕೆಲ್ಸ ಬುಟ್ಟೆ. ಕೈ ಸ್ವಾಧೀನ ಕಳ್ಕಂಡುಟ್ಟುತ ಗೊತ್ತಾದ ಮೇಲೆ ಬಾಳ ಬೇಜಾರ್ ಆತ್. ಅದ್ಕು ಮೊದಲು ನನ್ನ ಬರವಣಿಗೆ ಲಾಯ್ಕ ಚಿತ್ರ ಬುಸ್ಸ್ ತಾ ಇದ್ದೆ. ಈಗ ಅನಿವಾರ್ಯ ಆಗಿ ಎಡಕೈಲಿ ಇದೆಲ್ಲರ ಬರವಣಿಗೆ ಮಾಡುವಂಗೆ ಆತ್. ಆಗ ನಂಗೆ ಪರಿಚಯ ಆದ್ ಕರುಣಾಕರ ಕಜೆ. ಅವರ ಅಂಗಡಿಲಿ ಸಣ್ಣ, ಸಣ್ಣ ಬೋರ್ಡ್ ಬರೀತಾ ಇದ್ದೆ. ಗಿರಿಧರ ಕೈಂಗೋಡಿ ತ ಇದ್ದೊ, ಅವು ಚೇತನಾ ಆರ್ಟ್ಸ್‌ತ ಇಸಿಕಂಡಿದ್ದೊ. ಅಲ್ಲಿ ಸ ನಾನ್ ಕೆಲ್ಸ ಮುಂದುವರೆಸಿದೆ.

1989 ಲ್ಲಿ ಸಾಕ್ಷರತಾ ಆಂದೋಲನ ಸುರು ಆತ್. ಆಗ ಎಂ. ಎಸ್. ಜಯಪ್ರಕಾಶ್ ಮೋಂಟಡ್ಕ ನನ್ನ ಬೀದಿ ನಾಟಕಕ್ಕೆ ಕರ್ಕಂಡ್ ಹೋದ. ನಂಗೆ ಕೈ ಸರಿ ಇಲ್ಲೆ ನಟನೆ ಮತ್ತೆ ವಾದ್ಯಗಳ ಬಾರ್ಸಿಕೆ ಎಲ್ಲ ಆಕಿಲೆ ಹೇಳ್ರೂ ಬಿಡದೆ ನನ್ನ ಕರ್ಕಂಡ್ ಹೋದೊ. ಮೋಹನ್ ಸೋನ, ಗೋಪಡ್ಕರ್, ಎಂ. ಜಿ. ಕಜೆ, ಜಯಪ್ರಕಾಶ್ ಕುಕ್ಕೇಟಿ ಇವೆಲ್ಲ ಪರ್ಚಯ ಆದೊ. ಈ ತಂಡದ ಮುಖೇನ ಬಾಳಷ್ಟ್ ಪ್ರದರ್ಶನ ಕೊಟ್ಟೊ. ಬಲಕೈಲಿ ಬಾರಿಸ್ತಾ ಇದ್ದ ಟಮ್ಕಿ, ಚೆಂಡೆ ಎಲ್ಲನ ಎಡ ಕೈಲಿ ಬಾರ್ಸಿಕೆ ಕಲ್ತ್‌ಕಂಡೆ.

ಸುಮಾರ್ 175 ಹಳ್ಳಿಗಳಲಿ ಪ್ರದರ್ಶನ ಕೊಡುವ ಅವಕಾಶ ಸಿಕ್ಕಿತ್. 'ಜ್ಞಾನ ವಿಜ್ಞಾನ ಜಾಥಾ'ತ ಒಂದ್ ಬೀದಿ ನಾಟಕ ಜಾಥಕ್ಕೆ ಸುಳ್ಯ ಪ್ರದೇಶಂದ ರಾಮಚಂದ್ರ ಮರಾರ್, ಕರುಣಾಕರ ಕಜೆ ಮತ್ತೆ ನನ್ನ ಆಯ್ಕೆ ಮಾಡ್ದೊ. ಹಿಂಗೆ ನಾಟಕ ಮಾಡ್ತಾ ಮಾಡ್ತಾ ನನ್ನ ಕೈಯ ಸಮಸ್ಯೇನೇ ಮರ್ತ್ ಹೋತ್.

ಆಗ ಕರುಣಾಕರ ಕಜೆ 'ನೀನ್ ಇನ್ನು ಕಲಿಯೊಕು ಮುಂದೆ ಬಾಕು. ನಾವು ನೀನಾಸಂಗೆ ಪೋಯ'ತ ಹೇಳ್ದೊ ನಾ ಬಾದ್ಲೆ, ಬಸ್‌ಗೆ ದುಡ್ಡು ಕೂಡ ಇಲ್ಲೆ ತ ಹೇಳ್ಕನ ಎಲ್ಲ ವ್ಯವಸ್ಥೆನ ಅವನೇ ಮಾಡಿಕೊಟ್ಟತ್. ಹಂಗಾಗಿ

ನೀನಾಸಂಗೆ ಹೋದೊ. ಅಲ್ಲಿ ಮುಟ್ಟ ನೀನಾಸಂ ಏನುತ ಗೊತ್ತೇ ಇತ್ಲೆ. ಅಲ್ಲಿ ಸಂದರ್ಶನ ಆತ್. ಅಂದೇ ತೀರ್ಪು ಬಾತ್. ನಾನ್ ಆಯ್ಕೆ ಆಗಿದ್ದೆ ಕರುಣಾಕರ ಆಗಿತ್ಲೆ. ನಂಗೆ ಬೇಜಾರ್ ಆತ್. ಆಗ ಅಂವ ಹೇಳ್ತ್ 'ನಿಜವಾಗಿ ನಿಂಗೆ ಇದ್ ಸಿಕ್ಕಿಕಿದ್ದುದ್. ನಿನ್ನೊಟ್ಟಿಗೆ ನಾ ಒಳೆ'ತ ಹೇಳ್ತ್. ಅಲ್ಲಿಂದ ನನ್ನ ಮತ್ತೆ ನೀನಾಸಂನ ಒಡನಾಟ ಸುರು ಆತ್. ಕೈಯ ಸಮಸ್ಯೆ ಇದ್ದರೂ ಅದರ ಮೆಟ್ಟಿ ನಿತ್ತ್ ಮುಂದೆ ಬಂದೆ.

ಅಲ್ಲಿ ನನ್ನ ಬ್ಯಾಚ್‌ಲಿ ನಟರಾಜ್ ಹೊನ್ನವಳ್ಳಿ, ಅಚ್ಯುತ್ ನಂತಹವ್ರು ನನ್ನ ಕ್ಲಾಸ್ ಮೇಟ್ ಆಗಿದ್ದೊತ ಹೇಳಿಕೆ ಬಾಳ ಹೆಮ್ಮೆ ಆದೆ. ನೀನಾಸಂ ತಿರುಗಾಟಲಿ 5 ವರ್ಷ ಇದ್ದ್ ಕಡೆಗೆ ಸುಳ್ಯಲಿ ರಂಗಭೂಮಿ ಚಟುವಟಿಕೆ ಸುರು ಮಾಡ್ದೆ.

ನೀನಾಸಂಗೆ ಹೋಕೆ ಮುಂದೆ ಸುಳ್ಯಲೇ ಅಭಿನಯ ಸಂಸ್ಥೆಲಿ ನಾಟಕ ಮಾಡಿಕಂಡ್ ಇದ್ದೆ. ಮೈಸೂರು ರಂಗಾಯಣ ಸುರು ಆದ ವರ್ಷ ಅದ್. ಅಲ್ಲಿನ ವಿದ್ಯಾರ್ಥಿಗಳಿಗೆ ರಜೆಲಿ ತಮ್ಮ ಊರುಗಳಿಗೆ ಹೋಗಿ ಅಲ್ಲಿ ರಂಗ ತರಬೇತಿ ನೀಡಕು ಬಿ.ವಿ ಕಾರಂತರು ಅಜ್ಞೆ ಮಾಡಿದ್ದೊ. ಅಲ್ಲಿನ ವಿದ್ಯಾರ್ಥಿಗಳಾದ ಎಂ.ಎಸ್. ಗೀತಾ ಮೋಂಟಡ್ಕ, ಕೃಷ್ಣಮೂರ್ತಿ ನಾರ್ಣಕಜೆ ಸೇರಿಕಂಡ್ ಅಭಿನಯಕ್ಕೆ ಕಾರ್ನಾಡರ ನಾಗಮಂಡಲ ನಾಟಕ ಮಾಡ್ಸಿದ್ದೊ. ಅದರ್ಲಿ ಕಪ್ಪಣ್ಣನ ಪಾತ್ರ ಸಿಕ್ಕಿತ್.

ನಾನ್ ನೀನಾಸಂ ಮುಗ್ಸಿ ಬಂದಂಗೆ ಶಾಲಾ ರಂಗ ಯೋಜನೆ ಅಡಿಲಿ ನಾಟಕ ನಿರ್ದೇಶನ ಮಾಡ್ಸಿಕೆ ಅವಕಾಸ ಸಿಕ್ಕಿತ್. ಆಗ ಅಭಿನಯ ಸಂಸ್ಥೆಗೆ ಪುಷ್ಪರಾಣಿ ನಾಟಕ ಮಾಡ್ಸಿದೆ. ಅದಾದಂಗೆ ಅಲ್ಲಾವುದ್ದೀನ್ ಮತ್ತು ಮಾಂತ್ರಿಕ ದೀಪ, ಘಾಣಾಡಂಗೂರ, ಪಂಜರದ ಶಾಲೆ ಹಿಂಗೆ ನಾಟಕಗಳ ನಿರ್ದೇಶನ ಮಾಡ್ಸಿಯೊಳೊ.

ಅದಾದಂಗೆ ಪರಿವಾರ ರಂಗ ತ ಸುರು ಆತ್. ಅಲ್ಲಿ ಮಕ್ಕಳ ಸೇರ್ಸಿ ಒಂದು ನಾಟಕ ಸುರು ಮಾಡ್ದೆ. ಪ್ರಾಕ್ಟೀಸ್ ಮಾಡಿಕೆ ಸರಿ ಜಾಗ ಇಲ್ಲದ ಹೊತ್ತ್‌ಲಿ ಮನೆ ಜಾಲ್‌ಲೇ ಪ್ರಾಕ್ಟೀಸ್ ಮಾಡಿ ನಕ್ಕಳಾ ರಾಜಕುಮಾರಿ ನಾಟಕ ಸುರು ಆತ್. ಬಾಸುಮ ಕೊಡಗು, ಪದ್ಮ ಕೊಡಗು ಎಲ್ಲವು ಇದ್ದ ಕಾಲ ಅದ್. 'ಅಸುದ್ದ' ತುಳು ನಾಟಕ ಸ ಈ ತಂಡದ ಕಡೆಂದ ಮೂಡಿ ಬಾತ್. ಪರಿವಾರ ರಂಗ ಒಂದು ಸಂಸ್ಥೆಯಾಗಿ ಬೆಳ್ತ್. ಅಧ್ಯಕ್ಷ, ಕಾರ್ಯದರ್ಶಿತ ಯಾವುದೇ ಹುದ್ದೆ ಇಲ್ಲದೆ ಎಲ್ಲವ್ರೂ ಒಂದೇ ತೇಲುವಂಗೆ ನಡ್ತ್. ಕೆ.ವಿ ಹೇಮನಾಥ್, ಬಾಪು ಸಾಹೇಬರು, ಕಣಕ್ಕೂರು ಎಸ್.ಎನ್. ಸೀತಾರಾಂ, ಟಿ. ಕೆ ಹರೀಶ್, ಪದ್ಮನಾಭ ರೈ ಎಲ್ಲವ್ರೂ ಅ ಹೊತ್ತ್‌ಲಿ ಒಟ್ಟಿಗೆ ನಿತ್ತ್ ಸಹಾಯ ಮಾಡ್ದೊ.

**ವಿನೋದ್ ಮೂಡಗದ್ದೆ**, ತಿತಿಮತಿ
ಮೊ. 9535615759

# ಡಾ. ಕುರುಂಜಿ ವೆಂಕಟ್ರಮಣ ಗೌಡ ಮತ್ತು ಅರೆಭಾಷೆ



ಪ್ರತಿಯೊಬ್ಬ ಮೊನ್ಸ ಕೂಡಾ ತಾನ್ ಹುಟ್ಟಿದ ಮನೆತನ, ಅಯ್ಯೆ-ಅಪ್ಪ ಮತ್ತೆ ಭಾಷೆನ ಮರೆಕಾಗದ್‌ಗಡ. ಅದ್ ಮರೆಕೆನೂ ಆದುಲೆ. ಯಾರ್ ಬೊದ್ಕಿಕಾಗಿ, ಉದ್ಯೋಗ ಮಾಡಿಕ್ಕಾಗಿ, ಏನೋ ಕಾರಣಂದ ಊರು ಬುಟ್ಟ್ ದೇಶ-ಪರದೇಶಗಳಿಗೆ ಹೋದವೆ. ಎಲ್ಲೇ ಹೋದರೂ ಅಂವ ಹುಟ್ಟಿದ ಊರ್‌ನ, ಅವನ ಅಯ್ಯೆ-ಅಪ್ಪನ ಮತ್ತೆ ಅಂವ ಹುಟ್ಟಿದಾಂಗೆ ಕಲ್ತ ಭಾಷೆನ ಬದಲಾಯಿಸಿಕೆ ಆದುಲೆ. ಆದರೆ ಕೆಲವು ಜನಂಗಳಿಗೆ ಹಂಞ ದುಡ್ಡು ಆಕನ, ಊರ್‌ಬುಟ್ಟ್ ಹತ್ತಾರ್ ವರ್ಷ ಬೇರೆ ಊರ್‌ಲಿ, ದೇಶಲಿ ಇದ್ದಾಕನ, ನಾ ದೊಡ್ಡ ಜನಂತ ಅನ್ಸಿ ಊರ್‌ನ, ಭಾಷೆನ ಮರ್ತವೆ. ಇಂತೋವ್ಕೆ ಅಪವಾದವಾದ ನಮ್ಮ ಜನಾಂಗದ ಒಬ್ಬ ಭಾರೀ ದೊಡ್ಡ ಜನ ತೇಳ್ರೆ ಡಾ. ಕುರುಂಜಿ ವೆಂಕಟ್ರಮಣ ಗೌಡ್ರ್. ನಾ ಅವರ ಭಾರೀ ಹಕ್ಕಲೆಂದ ತಿಳ್ಕಂಡವ. ಅವರೊಟ್ಟಿಗೆ ಓಡಾಡಿಕಂಡಿದ್ದಂವ. ನನ್ನ ಶಿಕ್ಷಣಂದ ಹಿಡ್ದ್, ಈಗ ಮಾಡುವ ಉದ್ಯೋಗದವರೇಗೆ ತೇಳಿರೆ, ಸುಮಾರ್ 20-25 ವರ್ಷ ಅವರ ಮತ್ತೆ ಅವರ ಕುಟುಂಬದವರೊಟ್ಟಿಗೆ ಹಕ್ಕಲೆಂದ ಇದ್ದ್‌ಕಂಡ್ ಮಾತಾಡಿ, ಒಟ್ಟಿಗೆ ಉಂಡು, ಕೆ.ವಿ.ಜಿ.ಯ ಕಡೇ ಕಾಲಲಿ ಅವರೊಟ್ಟಿಗೆ ಪ್ರಯಾಣ ಮಾಡಿಕಾಕನ ಅವ್ಕೆ ಪ್ಯಾಂಟ್, ಶರ್ಟ್ ಹಾಕಿ ಮೋರೆಗೆ ಪೌಡರ್ ಹಾಕಿ, ಅವರ ತಲೆ ಬಾಚಿದ ಒಂದು ಭಾಗ್ಯ ಕೂಡ ನಂಗೆ ಸಿಕ್ಕಿಟ್ಟು.

ಡಾ. ಕುರುಂಜಿ ವೆಂಕಟ್ರಮಣ ಗೌಡರ ಸಾಧನೆಗಳ ಬಗ್ಗೆ ನಾ ಹೆಚ್ಚಿಗೆ ಹೇಳ್ತುಲೆ. ಯಾಕೆಂತೇಳ್ರೆ ಇಷ್ಟರೊಳಗೆ ಅವರ ಬಗ್ಗೆ ತುಂಬಾ ಜನ ಬರ್ದೊಳೊ. ಪೇಪರ್ಲಿ, ಪುಸ್ತಕಗಳ್ಲಿ ದಾಖಲಾಗುಟ್ಟು. ಇಷ್ಟ್ ಮಾತ್ರ ಹೇಳಿನೆ, ಅವು ಇಲ್ಲದೇ ಇರ್ತಿದ್ದರೆ ಸುಳ್ಯನ ನಾವು ಊಹಿಸಿಕ್ಕೊ ಸಾಧ್ಯ ಇತ್ಲೆ. ಬರೀ ಕಾಡುಗುಡ್ಡೆನಾಂಗಿದ್ದ ಸುಳ್ಯನ ಒಂದು ಮ್ಯಾಜಿಕ್‌ನಾಂಗೆ ಮಾಡಿ ಪೂರ್ತಿ ಬದಲಾಯಿಸಿದ ಸಾಧನೆ ಅವರ್ದ್. ನನ್ನೂರು, ಬೆಳೆಕೆ ಬೇಕಾದ ಶಾಲೆ, ಕಾಲೇಜು, ಆಸ್ಪತ್ರೆ, ಕರೆಂಟ್, ರೋಡ್, ಕೋರ್ಟ್, ದೇವಸ್ಥಾನ, ಪುರಭವನ, ಹೈಸ್ಕೂಲ್‌ಗ, ಕಾಲೇಜ್‌ಗಳಾದ, ಕಾನೂನು, ದಂತ, ತಾಂತ್ರಿಕ, ನರ್ಸಿಂಗ್, ಮೆಡಿಕಲ್ ಹೀಂಗೆ ಕಟ್ಟಿಕಂಡ್, ಕಟ್ಟಿಕಂಡ್ ಕುರುಂಜಿಗುಡ್ಡೆ ಒಂದು ದೊಡ್ಡ ವಿದ್ಯಾ ಸಂಕೀರ್ಣ ಆದ್ ನಾವ್ಗೆಲ್ಲ ಗೊತ್ತುಟ್ಟು. ಅದರೊಟ್ಟಿಗೆ ಊರೀಡೀ ಶಾಲೆಗ, ಜ್ಞಾನ ಮಂದಿರಗ, ರಂಗಮಂದಿರಗ, ಕಲ್ಯಾಣ ಮಂಟಪಗ, ಅಕ್ಷರ ಕರಾವಳಿ ಕಟ್ಟಡಗ, ಯುವಕ-ಯುವತಿ ಮಂಡಲ ಕಟ್ಟಡಗ ಹೀಂಗೆ ಹೇಳ್ತ ಹೋದರೆ ಅವರ ಕಥೆ ಮುಗ್ಯೊದುಲ್ಲೆ. ಅವರ ಬಗ್ಗೆ ಹೇಳ್ವಾದರೆ; ದೇಶಲಿ ಅರೆಭಾಷೆಲಿ ಆಡಳಿತ ಮಾಡುವ ಶಿಕ್ಷಣ ಸಂಸ್ಥೆಗ ಇದ್ದರೆ ಅದ್ ದಕ್ಷಿಣ ಕನ್ನಡದ ಜಿಲ್ಲೆನ, ಸುಳ್ಯಲಿ ಮಾತ್ರ. ಡಾ. ಕೆ.ವಿ.ಜಿಯೊವು ತೀರಿ ಹೋಗಿ ಇಲ್ಲಿಗೆ ಏಳು ವರ್ಷ ಆತ್. ಡಾ. ಕೆ.ವಿ.ಜಿ.ಯೊವು ಅಧ್ಯಕ್ಷರಾಗಿದ್ದ ಸಂದರ್ಭಲಿ ಅವರ ಆಫೀಸ್‌ಗೆ ಹೋದವರೊಟ್ಟಿಗೆಲ್ಲ ಅರೆಭಾಷೆಲೇ ಮಾತಾಡ್ತ ಇದ್ದೊ. ಅವರ ಮನೆಲಿ, ಅವರ

ಕುಟುಂಬ ಎಲ್ಲವೂ ಅರೆಭಾಷೆಲೇ ಮಾತಾಡ್ತ ಇದ್ದೊ. ಹಾಂಗಾಗಿ ಅಲ್ಲಿ ಕೆಲ್ಸ ಮಾಡುವ ನೌಕರರ್. ನಾವೆಲ್ಲ ಅವರೊಟ್ಟಿಗೆ ಅವರ ಮಕ್ಕಳೊಟ್ಟಿಗೆ ಇಂದಿಗೂ ಅರೆಭಾಷೆಲೇ ಮಾತಾಡುವೆ. ನಾವ್ಗೆ ಆಫೀಸ್‌ಲಿ ಅಂತ ಯಾವುದೇ ನಿರ್ಬಂಧ ಇಲ್ಲೆ. ಪ್ರಸ್ತುತ ಈಗ ಎ.ಓ.ಎಲ್.ಇ.ನ ಅಧ್ಯಕ್ಷರಾಗಿರುವ ಡಾ. ಚಿದಾನಂದನೊವು (ಕೆ.ವಿ.ಜಿ.ಯವರ ದೊಡ್ಡ ಮಂಜ) ಸಹ. ನಾವು ಗೌಡ ಮಕ್ಕಂತ ಗೊತ್ತಾದರೆ ಸಾಕ್, ಕೂಡ್ಲೆ ಎಂತಯಾ? ಯಾಕೆ ಬಂದದ್‌ಂತ ಕೇಳ್ವೆ. ಭಾಷ ಹೃದಯವಂತರ್ ಅವು. ಅದೇ ರೀತಿ ಪ್ರಧಾನಕಾರ್ಯದರ್ಶಿ ಆಗಿರುವ ಡಾ. ರೇಣುಕಾ ಪ್ರಸಾದ್ (ಕೆ.ವಿ.ಜಿ.ಯವರ ಎರಡನೇ ಮಂಜ) ಅರೆಭಾಷೆನ ಅರ್ಥ್ ಕುಡ್ಡವರಾಂಗೆ ಮಾತಾಡುವೆ. ಅವು ಯಾವತ್ತೂ ನಮ್ಮೊಟ್ಟಿಗೆ ಕನ್ನಡಲಿ ಆಗಲಿ, ಇಂಗ್ಲಿಷ್‌ಲಿ ಆಗಲಿ ಮಾತಾಡ್ಡೊವು ಅಲ್ಲ. ಒಂದು ರೀತಿಲಿ ಹೇಳ್ವಾದರೆ ಅರೆಭಾಷೆ ಅಕಾಡೆಮಿನ ಡಿ.ವಿ. ಸದಾನಂದನೊವು ಮುಖ್ಯಮಂತ್ರಿ ಆಗಿರಿಕನ ಕೆಲವು ವರ್ಷಗಳ ಹಿಂದೆ ಸ್ಥಾಪಿಸಿರೊ, ಸುಳ್ಯಲಿ ಸಮೂಹ ಶಿಕ್ಷಣ ಸಂಸ್ಥೆಗಳ ಮುಖಾಂತರ ಅಕಾಡೆಮಿ ಆಫ್ ಲಿಬರಲ್ ಎಜ್ಯುಕೇಶನ್‌ನ ಮುಖಾಂತರ ಪೂಜ್ಯ ಕೆ.ವಿ.ಜಿ.ಯೊವು ಅದ್ವಾಗನೋ ಸ್ಥಾಪಿಸಿ ಆಗುಟುಂತ ನಂಗೆ ಅನ್ಸಿದೆ.

ಡಾ. ಕೆ.ವಿ.ಜಿ.ಯೊವು ಅರೆಭಾಷೆಲಿನೂ ಎಷ್ಟ್ ಗ್ರಾಮ್ಯಾ ಭಾಷೆನ ಮಾತಾಡ್ತಾ ಇದ್ದೊಂತೇಳಿರೆ ಒಂದು ಘಟನೆನ ಈ ಸಂದರ್ಭಲಿ ನೆಂಪು ಮಾಡಿಕಣೆ. ಒಮ್ಮೆ ಕೆ.ವಿ.ಜಿ.ಯೊವ್ಕೆ 'ಸರ್ಪ ಸುತ್ತು' ತೇಳುವ ಕಾಯಿಲೆ ಬಂದಿತ್. ಅದ್ ಎಷ್ಟ್ ಕಸ್ಟಂತೇಳಿರೆ ಆ ಕಾಯಿಲೆ ಬಂದವಂಗೆ ಮಾತ್ರ ಅದರ ವಿವರ್ಸಿಕೆ ಸಾಧ್ಯ. ಪಾಪ ಅವ್ಕೆ ಅದ್ ಕುತ್ತಿಗೆ ಹಕ್ಕಲೆಂದ ಓಡ್ಡ್ ಬೆನ್ನಿನವರೆಗೆ ಇತ್. ಅದ್ ಸರ್ಪದಾಂಗೆ ಒಂದ್ ರೀತಿ ಕೆಂಪು ಆಗಿ ಉದ್ದಕ್ಕೆ ಇದ್ದು. ಅದ್ಕೆ ವೈದ್ಯಕೀಯ ಭಾಷೆಲಿ ಎಂತಂತ ನಂಗೂ ಗೊತ್ತಿಲ್ಲೆ. ಹಾಂಗೆ ನಾ ಗೊತ್ತಾಗಿ ಅವರ ನೋಡಿಕೆಂತ ಕಾಂತಮಂಗಲದ ಅವರ ಮನೆಗೆ ಹೋದೆ. ಹಿಂಬೊತ್ತ್ ಆಗಿತ್. ಅವು ಒಬ್ಬನೇ ಜಗಲಿಲಿ ಬರೀ ಪಂಚೆ ಉಟ್ಟು ಕುದ್ದ್‌ಕಂಡ್ ಇದ್ದೊ. ಬರೀ ಮೈಲಿ ಇದ್ದೊ. ನಂಗೆ ನೋಡಿ ಆಶ್ಚರ್ಯ ಆತ್. ಅವು ಯಾಗೋಳೂ ಬರೀ ಮೈಲಿ ಕುದ್ರೊವೆ ಅಲ್ಲ. ಅವರ ಕಂಡ್ ಕೈ ಮುಗ್ದ್, ಹೇಂಗೊಳರಿ ಸರ್? ಜೇನೆ ಕಮ್ಮಿ ಆತಂತ ಕೇಳ್ದೆ. ಇಲ್ಲೆಯಾ, ಜೇನೆ ಉಟ್ಟು-ಯಾರೊಟ್ಟಿಗೆ ಹೇಳ್ದುಂತ ಹೇಳಿಕಂಡೊ. ಸರ್. ಬರೀ ಮೈಲಿ ಒಳೊರಿ, ಒಂದು ಜೈರಾಸ್‌ನ ಮೈ ಮೇಲೆ ಹಾಕಂಕಾಲ್ಲಂತ ಕೇಳ್ದೆ. ಎಂತ ಜೈರಾಸ್? ಜೆನ್ಸ್, ಎಲ್ಲ 'ಚೋಂಕೆ' ಹೋಗಿ ಜೈರಾಸ್‌ನ ಒಂದು ನೂಲು ಕೂಡಾ ಅದ್ಕೆ ತಾಂಗಿರೆ ಜುವ್ವ ಹೋದಾಂಗೆ ಆದೆಂತ ಹೇಳ್ದೊ. ನೋಡಿ 'ಚೋಂಕೆ' ತೇಳುವ ಶಬ್ದ ಈಗ ಎಲ್ಲರ ಬಾಯಿಂದ ಮರೆಯಾಗುಟ್ಟು. ನಾವೆಲ್ಲ ಚರ್ಮ, ಇನ್ನು ಮುಂದೆ ಹೋಗಿ 'ಸ್ಕಿನ್'ಂತ ಎಲ್ಲ ಹೇಳುವೆ. ಆದರೆ ಕೆ.ವಿ.ಜಿ.ಯೋವು ಮಾತ್ರ ಹಳೇ ಭಾಷೆನ ಬುಟ್ಟತ್ತಿಲೆ.

ಇನ್ನು ಒಂದು ಆಶ್ಚರ್ಯದ ಸಂಗತಿತೇಳಿರೆ ಅವರ ಕುಟುಂಬದ ಕೆ.ವಿ.ಜಿ.ಯವರ ಒಬ್ಬಳೇ ಮಗಳ್ ಗೋವರ್ಧಿನಿಯವು ಮದುವೆ ಆಗಿ ಅಮೇರಿಕಾಲಿ ಇದ್ದು ಎಲ್ಲವೊಕ್ಕು ಗೊತ್ತುಟ್ಟು. ಅವು ತುಂಬಾ ವಿದ್ಯಾವಂತರ್ ಅವು ತುಂಬಾ ವರ್ಷಗಳ್‌ಂದ ಅಲ್ಲೆ ವಾಸ ಇದ್ದರೂ, ಊರಿಗೆ ಬಾಕನ ಅಪ್ಪಟ ಅರೆಭಾಷೆಲಿ ಮಾತಾಡ್ವೆ, ಕೆಲವು ಜನ 3-4 ವರ್ಷ ಅಮೇರಿಕಾ ಬುಡಿ; ಬೆಂಗಳೂರಿಗೆ ಹೋದರೆ ಸಾಕ್. ನಮ್ಮ ಭಾಷೆನ ಮರ್ತ್; ಹೋಗಿಬುಟ್ಟ್, ಬಂದ್‌ಬುಟ್ಟೆಂತ ದರ್ಬಾರ್‌ಲಿ ಮಾತಾಡುವೆ. ಆದರೆ ಭಾಷೆ ಅಭಿಮಾನಿ ಆದ ವರ್ಧಿನಿ ಅಕ್ಕ ಅಪ್ಪಟ ಅರೆಭಾಷೆಲಿ ಮಾತಾಡ್ದುರ ನೋಡಿರೆ ಅವರ ಬಗ್ಗೆ ಹೆಮ್ಮೆ

ಅನ್ಸಿದೆ. ಒಮ್ಮೆ ಮಧ್ಯಾಹ್ನ ಹೊತ್ತ್‌ಗೆ ನಾ ಅವರ ಪೇಟೆ ಮನೆಗೆ ಹೋಗಿದ್ದೆ. ಕಾರಣ ವರ್ಧಿನಿ ಅಕ್ಕ ಅಮೇರಿಕಾಂದ ಬಂದೊಳಂತ ಸುದ್ದಿ ಕೇಳಿ. ಆಗೆಲ್ಲ ಬಾಕ್ಯಾಕನ ನಾವ್ಗೆಲ್ಲ ಪೆನ್ನಾರ್ ಅಮೇರಿಕಾಂದ ತಾತಿದ್ದೊ. ಆ ಸಂದರ್ಭಲಿ ನಂಗೆ ಒಂದು ಅಮೇರಿಕಾದ ವಾಚ್ ತಂದಿದ್ದೊ. ಹಾಂಗೆ ನನ್ನ ಒತ್ತಾಯ ಮಾಡಿ ಊಟ ಮಾಡೋಮೋಂತ ಹೇಳ್ದೊ. ಅಪ್ಪನ (ಶ್ರೀಮತಿ ಜಾನಕಿ ವೆಂಕಟ್ರಮಣ ಗೌಡ) ಅಡುಗೆ. ಊಟಕ್ಕೆ ಕುದ್ದಾಕನ ಮಧ್ಯೆಲಿ ವರ್ಧಿನಿ ಅಕ್ಕಂಗೆ ಸಾಂಬಾರ್ ಮುಕ್ತ್. ಮೊಮ್ಮೆ ನಂಗೆ 'ಅಂಬರ' ತಂಬಂತ ಕರ್ದ್ ಹೇಳ್ದೊ. ನಂಗೆ ಆಗೊಳು ಆಶ್ಚರ್ಯ ಆತ್. ಅಕ್ಕ ನೀವು 'ಅಂಬರ'ನ ಮರ್ತ್‌ತಿಲ್ಲೆನಾಂತ ಕೇಳ್ದೆ. ಇಲ್ಲೆನ್ನ ನಾವು ಸಣ್ಣದರ್ಲಿ ಕಲ್ತದಲ್ಲಂತ ಹೇಳ್ದೊ. ನಿಜಕ್ಕೂ ಆಗ ನಂಗೆ ನಾಚಿಕೆ ಆತ್. ಯಾಕಂತೇಳ್ರೆ ನಾವೆಲ್ಲ 'ಅಂಬರ'ನ ಯಾಗೊಳೊ ಮರ್ತ್, ಸಾಂಬಾರ್‌ಗೆ ಬದಲಾಯಿಸಿಕಂಡೊಳೊ. ಹೀಂಗೆ ಹೇಳ್ತ ಹೋದರೆ ಅದೆಷ್ಟೋ ಕಥೆಗ ಒಳೊ. ಒಟ್ಟ್‌ಲಿ ಕೆ.ವಿ.ಜಿ.ಯೊವು ಅವರ ಕುಟುಂಬದವರೊಟ್ಟಿಗೆ, ಅವರ ಮಕ್ಕಳೊಟ್ಟಿಗೆ, ಮರಿ ಮಕ್ಕಳೊಟ್ಟಿಗೆ, ಅವರ ಕೆಲ್ಸದರವರೊಟ್ಟಿಗೆ ಅರೆಭಾಷೆನ ಬಾರೀ ಪ್ರೀತಿಲಿ ಬೆಳ್ಸಿದೊ. ಇಡೀ ಪ್ರಪಂಚಲಿ ಗುರುತಿಸಿಕಾಂಬ ವ್ಯಕ್ತಿ...... ನಮ್ಮ ಜನಾಂಗದ ಅರೆಭಾಷೆ ಗೌಡರಾಗಿ ಕುಗ್ರಾಮಲಿ ಹುಟ್ಟಿ, ಅದೂ ನಮ್ಮೂರ್‌ಲಿ ಹುಟ್ಟಿ...... ನಾವು ಅರೆಭಾಷಿಕರ್‌ಂತ ಹೆಮ್ಮೆಂದ ಹೇಳಿಕೆ ಅವೇ ಕಾರಣ ಆದೊಂತ ನಂಗೆ ಅನ್ಸಿದೆ.

ಪೂಜ್ಯ ಕೆ.ವಿ.ಜಿ.ನೊವು ಕಛೇರಿಗಳ್ಲಿ ಕೂಡ ಅರೆಭಾಷೆನನ್ನೇ ಆಡಳಿತ ಭಾಷೆನಾಂಗೆ ಮಾಡಿಕಂಡದರ್‌ಂದ ನಾವ್ಗೆ ಅವು ಒಬ್ಬ ದನಿಂತ ಅನ್ಸ್‌ತಿತ್ತ್‌ಲೆ. ನಾವುಗೆ ಮನೇಲಿ ಬೊಯ್ಯುಂಗೆ ಸುಟ್ಟಂವ, ಕುಟ್ಟೆ ತೆಗೆಯಂವ, ಮಾರಿ ಸಂತಾನ, ನೀವೆಲ್ಲ ಬೋರ್ಕೊತ್ ಮಾಡಿಕ್ಕಿಲ್ಲಂತ ಎಲ್ಲಾರ್ ಕೋಪಬಾಕನ ಬೊಯ್ಯೊತ್ತಿದ್ದೊ. ಆದರೆ ಅಷ್ಟೇ ಬೇಗ ಅದರ ಮರ್ತ್, ಬಾ ಅಣ್ಣ ಇಲ್ಲಿ. ಇಂದ ಅದರ ಮಾಡ್, ಇದರ ಮಾಡ್‌ಂತ ಹೇಳ್ತಾ ಇದ್ದೊ. ಅವರ ಕೋಪ ಬಾಯಿಲೇ ಇತ್ ಹೊರ್ತ್, ಮನ್ಸ್‌ಲಿ ಇರ್ತಿತ್ತ್‌ಲೆ. ಹಾಂಗಾಗಿ ನಾವ್ಗೆ; ಅದೆಲ್ಲ ನಮ್ಮದೇ ಸಂಸ್ಥೆಂತ ಆತಿತ್. ಅವು ನಮ್ಮ ದೊಡ್ಡ ಕುಟುಂಬದ ಹಿರಿಯೊವುಂತ ಅನ್ಸಿತ್ತಿತ್. ಯಾಕೆ ಇದರ ಹೇಳ್ತಾ ಒಳೆಂತ ಹೇಳಿರೆ, ಭಾಷೆ ತೇಳ್ದು ನಮ್ಮ ಹೃದಯದ ಭಾಷೆ, ಇದರ ಪ್ರಯೋಗ ಮಾಡ್ದರ್‌ಂದ ಅದ್ ನಾವ್ಗೆ ಬೇಗ ತಟ್ಟದೆಂತ ನಂಗೆ ಅನ್ಸಿದೆ. ಈಗಳೂ ಕೂಡಾ ಕೆ.ವಿ.ಜಿ. ಶಿಕ್ಷಣ ಸಂಸ್ಥೆಗಳ್‌ಲಿ ಕೆಲ್ಸ ಮಾಡೊವು ಹೆಚ್ಚಿನೊವು ಗೌಡ್ರ ಮಕ್ಕ. ಎಲ್ಲಿ ಹೋದರೂ, ಅರೆಭಾಷೆನೇ ಕಿವಿಗೆ ಕೇಳ್ತ ಉಟ್ಟು. ಈಗಿನ ಅಧ್ಯಕ್ಷರಾದ ಡಾ. ಚಿದಾನಂದನೊವು, ಪ್ರಧಾನ ಕಾರ್ಯದರ್ಶಿ ಡಾ. ರೇಣುಕಾ ಪ್ರಸಾದ್‌ನೊವು ಕೆ.ವಿ.ಜಿ.ಯೊವು ಬುಟ್ಟ್ ಹೋದ ಭಾಷೆನ ಪ್ರೀತಿಂದ ಬೆಳ್ಸ್‌ತ ಒಳೊ. ಈಗಳೂ ನಮ್ಮೊಟ್ಟಿಗೆ ಅರೆಭಾಷಲೇ ಮಾತಾಡುವೆ. ಬೊಯ್ಯುವೆ, ಕುಶಲ್ ಮಾತಾಡುವೆ. ಹಾಂಗಾಗಿ ನಾವ್ಗೆ ಕೂಡ ಅವರೊಟ್ಟಿಗೆ ಎಲ್ಲಿಲ್ಲದ ಪ್ರೀತಿ. ನಮ್ಮ ಅನ್ನದಾತರ್‌ಂತ, ಹೆಚ್ಚಾಗಿ ಬಂಧುಗಂತ ಅನ್ಸಿದೆ. ಖಂಡಿತ ಮತ್ತೊಮ್ಮೆ ಹೇಳ್‌ನೆ ಪೂಜ್ಯ ಕೆ.ವಿ.ಜಿ.ಯೊವು ಹುಟ್ಟಿಹಾಕಿದ ಶಿಕ್ಷಣ ಸಂಸ್ಥೆಗ ಅದ್ ಅರೆಭಾಷೆ ಗೌಡರ ಶಿಕ್ಷಣ ಸಂಸ್ಥೆಗಂತ ನಾವ್ಗೆಲ್ಲ ಅಭಿಮಾನ ಇರೋಕು. ನಮ್ಮ ಮಕ್ಕಳ ಮಕ್ಕಳ ಕಾಲಕ್ಕೂ ಈ ಎಲ್ಲ ಶಿಕ್ಷಣ-ಸಂಸ್ಥೆಗಳೊಟ್ಟಿಗೆ ಅರೆಭಾಷೆನೂ ಉಳಿಯೋಕುಂತ ಪೂಜ್ಯ ಕೆ.ವಿ.ಜಿ.ಯವರ ಮತ್ತೆ ಮಾತೃಶ್ರೀ ಶ್ರೀಮತಿ ಜಾನಕಿ ಅಪ್ಪನವರ ನೆನ್ಸಿಕಂಡ್ ಅವರ ಆಶೀರ್ವಾದ ಬೇಡಿಕಂಡ್ ನಮ್ಮ ಕುಲದೇವರಾದ ವೆಂಕಟ್ರಮಣ ದೇವ್ರಲ್ಲಿ ಪ್ರಾರ್ಥನೆ ಮಾಡಿಕಣೆ.

✍ **ಭವಾನಿಶಂಕರ ಅಡ್ತಲೆ**, ಅರಂತೋಡು ಗ್ರಾಮ, ಸುಳ್ಯ

ಸಂಸ್ಕೃತಿ ದರ್ಪಣ

# ಅರೆಭಾಷಿಕ ಸಂಸ್ಕೃತಿಲಿ ಗಾದೆಗಳ ಮಹತ್ವ

ಗಾದೆಗ ಜನಪದ ಸಾಹಿತ್ಯದ ಒಂದು ಪ್ರಮುಖ ಅಂಗ. ಈ ಗಾದೆಗ ಆಕಾರಲಿ ಚಿಕ್ಕದಾದರು ಅದು ಹೊರಹಾಕುವ ಅರ್ಥ ಬಹಳ ಮಹತ್ವಪೂರ್ಣದ್. ಮನ್‌ಸನ ಅನುಭವದ ಹಿನ್ನೆಲೆಲಿ ಇವು ಸೃಷ್ಟಿಯಾದವೆ. ಈ ಗಾದೆಗ ಅನೈಚ್ಛಿಕವಾಗಿ ಸಹಜವಾಗಿ ಮಾತ್‌ನ ಅನಿವಾರ್ಯ ಅಂಶತೇಳುವಂಗೆ ನುಗ್ಗಿ ಬಂದವೆ. ಒಂದು ಜನಾಂಗದ ಅನುಭವ ಸಂಪತ್ತಿಗೆ, ಒಂದು ಭಾಷೆನ ಸಾಮರ್ಥ್ಯಕ್ಕೆ ಆ ಭಾಷೆಲಿ ಸಂಗ್ರಹಣೆ ಆದ ಗಾದೆಗಳೇ ಸಾಕ್ಷಿಯಾದವೆ. ಅರ್ಥಗರ್ಭಿತ ಆದ ಮಾತ್‌ಗಳಿರುವ ಸಣ್ಣದ್ ಚೊಕ್ಕವಾದದ್ದ್ ಆದ ವಾಕ್ಯನೆ ಗಾದೆ. ಗಾದೆಗಳ್‌ಲಿ ಮಾತ್ ಮಿತವಾಗಿರೊಕು ಹಿತವಾಗಿರೊಕು.

ರಾಮೇಗೌಡನವು "ನನ್ನ ಅಭಿಪ್ರಾಯಲಿ ಗಾದೆಗತೇಳ್‌ರೆ, ಜನಬಳಕೆಲಿದ್ದ್, ಈಗನೂ ಇರುವ, ಉಪದೇಶಾತ್ಮಕ ಅಥವಾ ಸಲಹೆ ನೀಡುವ, ನಿಜವಾದ ಅರ್ಥನ ಮರ್‌ಸಿ ಅಲಂಕಾರಿಕ ಆಗಿ ವ್ಯಕ್ತವಾಗಿರುವ ರೂಪಕ ಅಥವಾ ಒಳಾರ್ಥ ಇಟ್ಟ್‌ಕಂಡ್ ರೂಪ ಬದ್‌ಲಿಸಿ ಕಾಂಬಕೆ ಸಿಗುವ ಜನಾಂಗವೊಂದರ ಸೂಕ್ತಿನೇ ಗಾದೆ"ತ ಹೇಳ್ತೊಳೊ.

ಗೌಡ್‌ಗ ಮಾತಾಡ್‌ಕನ ಮಧ್ಯೆ ಮಧ್ಯೆ ಗಾದೆಗಳ್‌ನ ತುಂಭಾ ಬಳ್‌ಸುವೆ. ತಾವು ಮಾತಾಡ್‌ದ ಮಾತ್‌ನ ಗಟ್ಟಿಗೊಳ್‌ಸಿಕೆ ಇಲ್ಲರೆ ಎದ್‌ರಾಳಿನ ಸೋಲ್‌ಸಿಕೆ ಗಾದೆನ ಬಳ್‌ಸುವೆ. ಗಾದೆಗಳ್‌ಲಿ ಮೆಚ್ಚುಗೆ, ಸಿಟ್ಟ್, ಆಕ್ರೋಶದ ಭಾವನೆಗಳಿದ್ದವೆ.

ಅರೆಭಾಷೆನ ಗಾದೆಗಳ್‌ಲಿ ಸಂಕ್ಷಿಪ್ತತೆ, ಸೂತ್ರಪ್ರಾಯತೆ, ಸಮತೂಕತೆ, ಪ್ರಾಸ, ಅನುಪ್ರಾಸ, ಪುನರಾವರ್ತನೆ, ಅಲಂಕಾರಗ, ಉಪಮೆಗ, ರೂಪಕಗ ಸಾಮಾನ್ಯ ಲಕ್ಷಣಗಳಾಗಿದ್ದವೆ. ಇನ್ನ್ ಅರೆಭಾಷೆನ ಗಾದೆಗಳ್‌ನ ಈ ಕೆಳಗಿನಂತೆ ಗಮನಿಸಿಕ್.

**1. ವ್ಯವಸಾಯಕ್ಕೆ ಸಂಬಂಧಿಸಿದ ಗಾದೆಗ :**

ಗೌಡರ ಪ್ರಧಾನ ಕಸುಬು ಕೃಷಿ. ಅರೆಭಾಷೆನ ಗಾದೆಗಳ್‌ಲಿ ಕೃಷಿಕರ ಸುಖದುಃಖಗ ಎದ್ದ್‌ಕಂಡದೆ.

ಉದಾ :– 1. ಬರೆಕರೆ ಭೂಮಿ ನೆರೆಕರೆ ಹೆಣ್ಣ್ ಬೇಡ
2. ಗದ್ದೆ ಇದ್ದಂವ ಕುದ್ದು ತಿಂತ್

**2. ವೃತ್ತಿಗೆ ಸಂಬಂಧಿಸಿದ ಗಾದೆಗ :**

ಉದಾ:– 1. ಕಳ್ಳನ ಹೆಜ್ಜೆ ಕಳ್ಳಂಗೆ ಗೊತ್ತು
2. ಅವನ ನಾಲಗೆ ಹಜಮನ ಕತ್ತಿ.

**3. ಜಾತಿಗೆ ಸಂಬಂಧಿಸಿದ ಗಾದೆಗ :**

ಉದಾ:– 1. ಗೌಡ :ಬ್ರಾಹ್ಮಣ ಮಾಡ್‌ದ ಪಿಂಡಕೆ, ಗೌಡ ಮಾಡ್‌ದ ಹೆಂಡಕೆ.
2. ಬ್ಯಾರಿ:ಮಾಪಿಳ್ಳೆ ಸಾಕಿದ ನಾಯಿ ಟೊಪ್ಪಿ ಕಂಡವನೊಟ್ಟಿಗೆ ಹೋದೆ.

**4. ಸಸ್ಯಗಳಿಗೆ ಸಂಬಂಧಿಸಿದ ಗಾದೆಗ:**

ಉದಾ : 1. ಗಂಡ್ ತೆಂಗಿನ ಮರದಂಗೆ ಹೆಣ್ಣ್ ಬಾಳೆಗಿಡದಂಗೆ
2. ನುಗ್ಗೆ ಮರಲಿ ನೇಲಿಕೆ ಆಗದ್.

ತರಕಾರಿಗ:

ಉದಾ:- 1. ಕೆಸದ ದಂಟಿಗೆ ಕರ್‌ಕಟ್ಟಿದಂಗೆ

2. ನಿನ್ನೆ ಬಂದ ಮಳೆಗೆ ಹುಟ್ಟಿದ ಜಗಟೆನಂಗೆ.

ಧಾನ್ಯಗ

ಉದಾ:- 1. ರಾಗಿನಂಗೆ ಮೊಣ್ಣಂಗೆ

2. ಕುಡು (ಹುರುಳಿ) ಬೆಳ್‌ದ್ ಕಳೆ ಹಾಳ್ ಮಾಡ್.

ಪ್ರಾಣಿಗ :

ಉದಾ:- 1. ನಾಯಿಬೊಗಳ್‌ರೆ ದೇವಸ್ಥಾನ ಹಾಳದನ?

2. ಹಾಲಿಗೆ ಬಂದವಂಗೆ ಹಸ್‌ನ ಕ್ರಯ ಯಾಕೆ?

ಕೀಟಗ :

ಉದಾ: 1. ನೊಣ ತಿಂದ್ ಕುಲಕೆಡಿಸಿಕಂಡಂಗೆ

2. ಎರೆಹುಳಕ್ಕೂ ವಿಷ ಬಂದಂಗೆ.

**5. ಅಡ್‌ಗೆ ಆಹಾರಕ್ಕೆ ಸಂಬಂಧಿಸಿದ ಗಾದೆಗ :**

ಉದಾ:- 1. ಅಕ್ಕಿ ಮೇಲೆ ಆಸೆ ನೆಂಟ್ರ ಮೇಲೆ ಪ್ರೀತಿ

2. ತಂಗುಳನ್ನ ತಿಂಬವಂಗೆ ಪಾಯಸದ ಗ್ಯಾನ

**6. ಕುಟುಂಬಕ್ಕೆ ಸಂಬಂಧಿಸಿದ ಗಾದೆಗ:**

ಉದಾ:- 1. ಅತ್ತೆಮ್ಯಾಲೆ ಸಿಟ್ಟ್ ಕೊತ್ತಿಮ್ಯಾಲೆ

2. ನೂಲ್‌ನಂಗೆ ಸೀರೆ, ಅಯ್ಯನಂಗೆ ಮಗುಳು

**7. ದೇಹಕ್ಕೆ ಸಂಬಂಧಿಸಿದ ಗಾದೆಗ :**

ಉದಾ:- 1. ಅಂಗಾಲಿಗೆ ನಾಚಿಕೆ ಇಲ್ಲೆ

2. ಅವರವರ ತಲೆಗೆ ಅವರವರ ಕೈ

ಹಿಂಗೆ ಬದ್‌ಕ್‌ನ ವಿವಿಧ ಸಂದರ್ಭಗಳ್‌ಲಿ ಬಳಕೆಯಾಗುವ ಗಾದೆಗ ಗೌಡರ ಸಂಸ್ಕೃತಿಯ ಹಲವು ಮಜಲ್‌ಗಳ್‌ನ ವಿವರಿಸುತ್ತಾ ಹೋದೆ. ಯಾರ ಹಂಗೂ ಇಲ್ಲದೆ ಹೇಳೊಕಾದನ್ನ ನೇರ ಆಗಿ ಹೇಳುವ ಗಾದೆಗ ಗೌಡರ ಸಂಸ್ಕೃತಿನ ಒಳಪದರನ ಸ್ಪರ್ಶಿಸಿದೆ. ಮುಕ್ತ ಮನ್‌ಸ್‌ನ ಸ್ಥಿತಿಲಿ ಇವು ರಚನೆ ಆದರ್‌ಂದ ಗೌಡರ ಜೀವನದ ವಿಶ್ಲೇಷಣೆ ಮುಖ್ಯ ಪಾತ್ರವಹಿಸಿದೆ.

ಜೀವನದ ಸೂಕ್ತ ಸಂದರ್ಭಲಿ ತಾಳ್‌ದ ಯೋಗ್ಯ ನಿರ್ಣಯಗ ಗಾದೆಗಳಾಗಿ ಮಾರ್ಪಟ್ಟ್ ಬದ್‌ಕಿಗೆ ಮಾರ್ಗದರ್ಶಕವಾಗಿ ನಿಂತವೆ. ಗಾದೆಗ ಜ್ಞಾನದ ಆಗರ, ಅನುಭವದ ಸಾಗರನು ಹೌದು. ಈ ಗಾದೆಗ ಪಾಮರಂದ ಹಿಡ್ದ್ ಪಂಡಿತರವರೆಗೆ ಬಡವ-ಬಲ್ಲಿದ, ಮೇಲ್-ಕೀಳ್ ಎಂಬ ತಾರತಮ್ಯವಿಲ್ಲದೆ ಎಲ್ಲರ್‌ನ ಸೆಳೆದದೆ. ಎಲ್ಲವೂ ಕೂಡ ಮಾತ್‌ಕತೆಲೆ, ಉಪದೇಶಗಳಲಿ, ಬೋಧನೆಲಿ, ಚರ್ಚೆಗಳಲಿ, ಬರಹಲಿ ಭಾಷಣಗಳಲಿ ಗಾದೆನ ಬಳ್‌ಸುವೆ.

'ಗಾದೆ ಸುಳ್ಳಾದರೂ ವೇದ ಸುಳ್ಳಾದುಲೆ' ತೇಳುವ ಮಾತುಟ್ಟು. ವೇದಗಳಂಗೆನೆ ಇದ್ ನೀತಿಪ್ರಧಾನವಾದ ಸತ್ಯನಿಷ್ಠ ರಚನೆ. ಹಂಗೆನೇ ಸನಾತನವೂ, ಪ್ರಭಾವಯುತವೂ

ಎಲ್ಲಾ ಜನ ಒಪ್ಪಿದ ವಾಙ್ಮೆಯು. ವೇದ ಕೆಲವರ ಸೊತ್ತಾದರೆ ಗಾದೆ ಸಕಲನ ಸೊತ್ತು.

ದೇಶವಿದೇಶಗಳ್‌ಲಿ ಚಲಾವಣೆಲಿರುವ ಗಾದೆಗಳ ಒಗೆಗಿನ ಗಾದೆಗ ಹಿಂಗುಟ್ಟು. ಗಾದೆ ಯಾಗೊಳು ಸುಳ್ಳಾದುಲೆ (ಜರ್ಮನಿ), ಸಣ್ಣ ಸೂಕ್ತಿ ಬ್ರಹ್ಮಾಂಡದಷ್ಟ್ ವಿವೇಕನ ಹೊಂದಿದ್ದದೆ (ಗ್ರೀಸ್), ಮಾನವನ ಯೋಚನೆನೆ ಗಾದೆಗಳಾಗಿ ಹೊಮ್ಮಿದೆ (ಸ್ವೀಡನ್) ನಿಜ ಇಲ್ಲದ ಗಾದೆಯಿಲ್ಲ (ಸ್ಪೆಯಿನ್) ಎಲ್ಲವೂ ಹೇಳ್‌ದ್ ನಿಜ ಇರೊಕು (ಇಂಗ್ಲೆಂಡ್), ದೈನಂದಿನ ಅನುಭವನೆ. ಹೆಣ್ಣು ಮಕ್ಕಳೇ ಗಾದೆಗ (ಹಾಲೆಂಡು). ಗಾದೆ ಸುಳ್ಳಾದರೆ ಹಾಲು ಹುಳಿಯಾದೆ. (ಮಲಯಾಳಂ) ಗಾದೆ ಗೊತ್ತಿದ್ದವ ಜಗಳ ಬಿಡಿಸಿದೆ (ಆಫ್ರಿಕಾ)

ಆಡುಮುಟ್ಟದ ಸೊಪ್ಪಿಲ್ಲೆತೇಳುವಂಗೆ ಗಾದೆ ಮುಟ್ಟದ ವಸ್ತು ಇಲ್ಲೆ. ನಾಗರಿಕ ಜಗತ್ತಿಗೆ ಗೋಚರಿಸದೆ ಇದ್ದ ಅನೇಕ ಸೂಕ್ಷ್ಮ ಸಂಗತಿಗ ಗ್ರಾಮೀಣ ಬದುಕಿನ ಜಗತ್ತಿಗೆ ಗೋಚರಿಸಿದೆ. ಗ್ರಾಮೀಣ ಬದ್‌ಕ್‌ನ ಆಸೆ ಆದರ್ಶಗ, ಸುಖದುಃಖಗ, ಗಾದೆಗಳ್‌ಲಿ ಮೂಡಿ ಬಂದದೆ. ಸರ್ವವ್ಯಾಪಿಯಾದ ಗಾದೆಗ ಸಕಲ ಜ್ಞಾನಗಳ್‌ನ ಒಳಗೊಂಡಿದ್ದದೆ. ಲೋಕಾನುಭವದ ಗಾದೆಗಳ್‌ಲಿ ನೀತಿ, ನಯ, ಆಚಾರ, ಅನಾಚಾರಗ ಹೊರಹೊಮ್ಮುವೆ. ಉದಾಹರಣೆಗೆ "ಮಾಡುದು ಅನಾಚಾರ ಮನೆ ಮುಂದೆ ಬೃಂದಾವನ"ತೇಳುವ ಗಾದೆ ಮೂಲತಃ ಯಾರಿಗೋ ಒಬ್ಬಂಗೆ ಅನ್ವಯ ಆಗ್‌ತಿತ್ತ್. ಕಾಲಕ್ರಮೇಣ ಜನಸಾಮಾನ್ಯರಿಗೆಲ್ಲ ಸೇರುವಂತಾತ್. ಮೂರು ಹೊತ್ತು ಪಾಪದ ಕೆಲಸಗಳ್‌ನ ಮಾಡಿ ಮತ್ತೆ ಪೂಜೆ ಪುನಸ್ಕಾರ, ಜಪ ತಪ ಯಾತ್ರೆಗಳ್‌ನ ಮಾಡ್‌ರೆ ಪ್ರಯೋಜನ ಇಲ್ಲೆ. ಸದಾಚಾರ ಮೊದುಲು ಎನ್ನುವ ತತ್ವನ ಇದ್ ಪ್ರತಿಪಾದಿಸಿದೆ. ಸಮಾಜದ ಸುಖಸಂಪತ್ತ್‌ಗಳಿಗೆ ನೀತಿನೆ ಅಡಿಗಲ್ಲ್. ಮನ್‌ಸನ ಮನಸ್ಸ್‌ನ ತಿದ್ದುವ, ಧರ್ಮನ ರಕ್ಷಿಸುವ ಶಕ್ತಿ ಅದ್.

ಗಾದೆಗ ಒಂದು ನಾಡ್‌ನ ಸಂಸ್ಕೃತಿಗೆ ಆದರ್ಶ ಹಾಗೂ ಒಂದು ಜನಾಂಗದ ಸಂಸ್ಕೃತಿಗೂ ಆದರ್ಶ ಹಾಗೂ ದೂರದರ್ಶಿನು ಹೌದು. ಇಡೀ ಜಗತ್ತೇ ಇಂದ್ ಗಾದೆಗಳ ವಸ್ತು. ಸಮಾಜನ ತಿದ್ದುವ ಚಿಕಿತ್ಸಕ ಗುಣ ಗಾದೆಗಳಲಿ ಪ್ರಮುಖವಾಗಿ ಗಮನಿಸಕ್.

✍ **ಡಾ. ಕೋರನ ಸರಸ್ವತಿ ಪ್ರಕಾಶ್,** ಸಹ ಪ್ರಾಧ್ಯಾಪಕರು
ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜು, ಮಡಿಕೇರಿ
ಮೊ. : 9483826271

## ಸಂಚಿಕೆನ ವಿಮರ್ಶೆ

ಹಿಂಗಾರ ಸಂಚಿಕೆನ ಓದಿದಿ ಎಲ್ಲಓದ್‌ಗರ್ ಸಂಚಿಕೆಲಿ ಪ್ರಕಟಆದ ಬರವಣಿಗೆಗಳ ಬಗ್ಗೆ ನಿಮ್ಮಅಭಿಪ್ರಾಯನ ಕಳ್ಸಿ ಕೊಡಿ. ಮುಂದೆನಸಂಚಿಕೆಲಿ ಸಂಚಿಕೆನ ವಿಮರ್ಶೆ ಅಂತೇಳುವ ಅಂಕಣಲಿ ಓದ್‌ಗರ ಅಭಿಪ್ರಾಯಂತೇಳಿ ಪ್ರಕಟಿಸಿವೆ.ಇದ್ ಸಂಚಿಕೆನಇನ್ನಷ್ಟ್ ಲಾಯ್ಕಲಿ ಹೊರತಾಕೆ ಒಳ್ಳೆದಾದೆ.

# ಚೆಂಬು ಊರುಲೊಂದು ಕೆಡ್ಡಾಸ ಗೌಜಿ

ಕೊಡಗಿನ ಗಡಿಭಾಗದ ಸಂಪಾಜೆ ಹತ್ರದ, ಹೆಚ್ಚು ಕಮ್ಮಿ ಸುಮಾರಿಗೆ 500 ಮನೆಗ ಇರುವ ಊರು ಚೆಂಬು. ಇಲ್ಲಿ ಸಾಮಾನ್ಯ ಎಲ್ಲಾ ಭಾಷೆ ಮಾತನಾಡುವ ಜನಂಗ ಒಳೊ. ಹೆಚ್ಚಿನವರ ಮನೆಮಾತ್ ಅರೆಬಾಸೆ. ಹಂಗಾಗಿ ಉಳ್ಳ ಬಾಸೆಯವ್ರುಕೂ ಈ ಬಾಸೆ ಪರಿಚಿತ ಮತ್ತೆ ತಮ್ಮ ದಿನನಿತ್ಯದ ಬಳಕೆಲಿ ಅದನ್ನ ಬಳ್ಸುವೆ ಕೂಡ. ಹಂಗೇನೇ ನಮ್ಮ ಚೆಂಬು ಊರುಲಿ ಅರೆಬಾಸೆ ಒಂದು ಸಮುದಾಯದ ಬಾಸೆ ಮಾತ್ರ ಆಗದೇ ಅದು ಇಡೀ ಊರುನ ಬಾಸೆ ಆವುಟೂನ್ತಬೇಕರೆ ಹೇಳಕ್. ಈ ಊರುನ ಸುಕಕೂ, ದುಖಕ್ಕೂ ಎಲ್ಲವ್ರೂ ಆಗಿ ಬಂದವೆ ಮತ್ತೆ



ಕೂಡಿಯಾಡಿ ಕಂಡವೆ.ಈ ಊರುನ ಮುಖ್ಯಬೆಳೆ ಮತ್ತೆ ಆದಾಯದ ಮುಖ್ಯ ಮೂಲ ಅಡಿಕೆ ಮತ್ತೆ ರಬ್ಬರ್. ಗುಡ್ಡಗಾಡ್ ಇರುವಂತ ಈ ಊರುಲಿ ಮೊನ್ನೆ ಜನವರಿ ತಿಂಗಳ್ಲಿ, ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತೆ ಸಾಹಿತ್ಯ ಅಕಾಡೆಮಿಯ ಕೂಡೂ ಕಟ್ಟ್ಲ್ ಕೆಡ್ಡಾಸ ಹಬ್ಬದ ಪ್ರಯುಕ್ತ? ಕೆಡ್ಡಾಸ? ಗೌಜಿಂ ತೇಳುವ ಒಂದು ಲಾಯ್ಕನ ಜಂಬರ ಪ್ರೋಗ್ರಾಮ್‌ಲಿ ನಡ್ತ್. ಅದು ಸಾಕಷ್ಟು ಜನರ್ನ ತಲುಪಿಟುಂ ತೇಳುದಕ್ಕೆ ಅಲ್ಲಿ ಸೇರ್ದಂತಹ ಜನರ ಸಂಖ್ಯೆನೆ ಸಾಕ್ಷಿ.

ಹೊತಾರೆ ನಮ್ಮ ಅಕಾಡೆಮಿನ ಅಧ್ಯಕ್ಷರಾದ ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ ಅವರ ಅಧ್ಯಕ್ಷತೆಲಿ, ಶ್ರೀ ಜಿ. ಎ. ಹರೀಶ್ ಅವ್ರು ಉದ್ಘಾಟನೆ ನೆರವೇರಿಸಿ ಕೊಟ್ಟೊ. ವೇದಿಕೆಲಿ ಗಣ್ಯರಾದಂತ ತೆಕ್ಕಡೆ ಶೋಭಾ ಮೋಹನ್, ಶ್ರೀ ಕೆ.ಕುಮಾರ್, ಶ್ರೀ ನಾಗೇಶ್ ಕುಂದಲ್ಪಾಡಿ, ಶ್ರೀ ದಿನೇಶ್ ಊರುಬೈಲು, ಡಾ. ಎನ್. ಎ. ಜ್ಞಾನೇಶ್, ಶ್ರೀ ಎನ್. ಸಿ. ಅನಂತ್, ಶ್ರೀ ಕುಯಿಂತೋಡು ದಾಮೋದರ, ಶ್ರೀ. ದಿನೇಶ್ ಪೂಜಾರಿಗದ್ದೆ, ಶ್ರೀ ಜೀವನ್ ಪೆರಿಗೇರಿ, ಅವರ ಉಪಸ್ಥಿತಿ ಮತ್ತೆ ಅವರ ತೂಕದ ಮಾತ್‌ಗಳಂದ ಸುರೂನ ಸುತ್ತಿನ ಜಂಬರ ಲಾಯ್ಕಲಿ ಮುಗ್ತ್. ಮತ್ತೆ ವೇದಿಕೆ ಕಾರ್ಯಕ್ರಮ. ಸಂಜೆ ಸಮಾರೋಪದ ಕಾರ್ಯಕ್ರಮದವರೆಗೂ ಕಾರ್ಯಕ್ರಮ ಗೆಲುವ್ರು ಕಂಡುಟುತೇಳುದು ನಮಿಗೆ ಕುಸಿ ಕೊಟ್ಟ ಸಂಗತಿ.

ಒಂದು ಕೆಡ್ಡಾಸ ಹಬ್ಬದ ಕಾರ್ಯಕ್ರಮನ ಇಟ್ಟ್ಕಂಡ್ ಆಮೂಲಕ ಹೆಂಗೆ ನಮ್ಮ ಬಾಸೆ ಮತ್ತೆ ಸಂಸ್ಕೃತಿನ ಉಳಿಸಿ ಕಣಕ್ ಅನ್ನುವ ನಿಟ್ಟ್ಲ್ ಅಲ್ಲಿಯ ಕಾರ್ಯಕ್ರಮ ರೂಪ್ರುಗೊಂಡಿತ್ತ್. ಮನ್ಸರ ಬೊದ್ಕುಲಿ ಆಚರಣೆಗ ಬಾಳಾ ಮುಖ್ಯ. ಒಂದು ಸಮುದಾಯದ ಬಾಸೆ ಮತ್ತೆ ಸಂಸ್ಕೃತಿ ಉಳಿಯೋಕುತಾದರೆ ಆಚರಣೆಗಬೇಕಾದೆ. ಈಗ ನಮಿಗೆಲ್ಲ ಗೊತ್ತಿರುವಂಗೆ ಪ್ರಪಂಚ ಬಾಳಬೇಗ ಓಡುತ್ತುಟ್ಟು. ಹಂಗಾಗಿ ಹೊರಜಗತ್ತಿಗೆ ನಾವ್ರು ಇಣ್‌ಕುತ್ತಿರುವ ಕಾರಣ ನಮ್ಮ ಸಂಸ್ಕೃತಿಯ ಸೊಗಡು ಸಹಜವಾಗಿ ಮಾಯಾ ಅಗ್ತ

ಹೋಗುತ್ತುಟ್ಟು. ನಮ್ಮ ಹಿರಿತಲೆಗಳಿಗೆ ನಮ್ಮ ಸಂಸ್ಕೃತಿ ಗೊತ್ತಿದಷ್ಟು ನಮಿಗೆ ಗೊತ್ತೆ. ಅಂದರೆ ನಮ್ಮ ಮಕ್ಕಳ ಗತಿ? ಹಂಗಾಕಾಗದ್ದೇಳುವಂತ ಆಲೋಚನೆಲಿ ನಮ್ಮ ಸಂಸ್ಕೃತಿ, ಬಾಸೆನ ಉಳಿಸಿ ಬೆಳ್ಸುವ ವಾರಸುದಾರರ್‌ನಾವೇ ಆಕುಂತೇಳಿ ಈ ರೀತಿಯಾದಂತಹ ಕಾರ್ಯಕ್ರಮ ಅಕಾಡೆಮಿ ವತಿಂದ ಹಮ್ಮಿಕೊಂಡೊ.

ಮನ್ಸರ ಹುಟ್ಟುಂದ ಸಾಯುವವರೆಗೆ ನಡ್ಸುವ ವಿಧಿವಿಧಾನಗಳನ್ನ, ಆಚರಣೆಗಳನ್ನ ಪ್ರಾತ್ಯಕ್ಷಿಕೆನಾಂಗೆ, ಸಚಿತ್ರವಾಗಿ, ಊರುನ ಹಂಗೆ ಆಸುಪಾಸಿನ ಪ್ರತಿಭೆಗ ನಮ್ಮ ಮುಂದೆ ಮಾಡಿತೋರ್ಸಿದೊ. ಶ್ರೀಯುತ ಸುಂದರ ಕೇನಾಜೆ, ಶ್ರೀ ಚಂದ್ರಶೇಖರ ಹೊಸೂರು, ಶ್ರೀಮತಿ ಶೀಲಾವತಿ ಕೃಷ್ಣಪ್ಪ ಜಿಳಿಯಾರ್, ಶ್ರೀ ದೊಡ್ಡಣ್ಣ ಬರೆಮೇಲು, ಶ್ರೀ ಲೋಕನಾಥ್ ಅಮೆಚೂರ್ ಈ ವಿಚಾರಗಳ ಕುರಿತು ಮಾತಾಡಿರೆ, ಸ್ವಾಮಿ ವಿವೇಕಾನಂದ ಯುವಕ ಮಂಡಲ ಚೆಂಬು, ಗೌಡರ ಯುವ ಸೇವಾಸಂಘ ತೊಡಿಕಾನ, ಸಂಪಾಜೆಯ ಪಂಚಾನನ ಭಜನಾತಂಡ, ಗೌಡರ ಯುವಸೇವಾ ಸಂಘಚೆಂಬು, ಮರ್ಕಂಜದ ಸ್ಪಂದನ ತಂಡ ಅದನ್ನ ಕಣ್ಣಿಗೆ ಕಟ್ಟುವಂಗೆ ಮಾಡಿ ತೋರ್ಸಿದೊ.

ಒಂದೊಂದು ಬಾಗಲಿ ಆಚರಣೆಗ ಒಂದೊಂದು ಬಗೆಲಿ ಇರ್ದು. ಸಮಯದ ಮಿತಿಂದ ನಮ್ಮೂರ್ನ ಆಸುಪಾಸ್‌ನಲ್ಲಿ ನಾವೆಂಗೆ ಆಚರಣೆ ಮಾಡುವೆ ಅನ್ನುದನ್ನ ಮಾತ್ರ ಪ್ರಸ್ತುತ ಪಡ್ಸಿದೊ. ಅದು ತುಂಬಾ ಪರಿಣಾಮಕಾರಿಯಾಗಿತ್ತು. ಒಟ್ಟುಲಿ ಬೆಳ್ಗ್ಗಿಂದ ಒಂಬೊತ್ತುವರೆಗೆ, ಕೆಡ್ಡಸ ಹಬ್ಬದ ಆಚರಣೆ, ಕೂಸಿನ ತೊಟ್ಟಿಲ್, ಮನೆ ಒಕ್ಕುಲು, ಮೊದುವೆ, ಬೊಜ್ಜದವರೆಗಿನ ಕಾರ್ಯಕ್ರಮನ ತೋರ್ಸಿಕೊಟ್ಟೊ. ಒಟ್ಟಿಗೆ, ಪ್ರಾತ್ಯಕ್ಷಿಕೆ ಒಟ್ಟೊಟ್ಟಿಗೆ ನಡ್ತ್. ನಮ್ಮ ಸಮುದಾಯದವು ಮಾತ್ರ ಅಲ್ಲ, ನಮ್ಮ ಪರಿಸರಲಿ ಯಾರೆಲ್ಲಾ ಅರೆಬಾಸೆ ಮಾತಾಡುವೆನೋ ಅವು ಕೂಡ ಈ ಕಾರ್ಯಕ್ರಮಲಿ ಸೇರ್ಕಂಡೊ. ನಮ್ಮ ಅಕಾಡೆಮಿಯ ಉದ್ದೇಸ ಕೂಡ ಇದುವೆ. ಒಂದು ಬಾಸೆ ಸಂಸ್ಕೃತಿ ಗಡಿದಾಟಿ ಹೋಕುಂತಾದರೆ ನಾವು ನಮ್ಮ ಸುತ್ತಮುತ್ತಲಿನವು ಎಲ್ಲವೂ ಅದನ್ನ ಬಳ್ಸಿರೆ ಮಾತ್ರಸಾಧ್ಯ.

ಈ ಜಂಬರದ ಒಟ್ಟು ಪರಿಕಲ್ಪನೆ ಮತ್ತೆ ಸಹಕಾರ, ಮಾರ್ಗದರ್ಶನ ಕಲಾವಿದ, ರಂಗಕರ್ಮಿ ಲೋಕೇಶ್ ಊರುಬೈಲ್ ಅವರದ್ದು. ಚೆಂಬು ಊರವರ ಒಂದು ಪ್ರಾಮಾಣಿಕ ಮನಸಿನ ಸಹಕಾರಲಿ ಈ ಕಾರ್ಯಕ್ರಮ ನಡುದುಟು. ಇಡೀ ಈ ಜಂಬರದ ಯಶಸ್ಸಿನ ಪಟ್ಟ ಲೋಕೇಶ್ ಊರುಬೈಲು ಮತ್ತೆ ಚೆಂಬು ಊರವ್‌ಕೆ ಸೇರೊಕು. ಅಕಾಡೆಮಿ ಒಂದು ನೆಪ ಅಷ್ಟೆ.

ನಮ್ಮ ಇಂತಹ ಉಪಬಾಸೆ ಮತ್ತೆ ಸಂಸ್ಕೃತಿಯೇ ನಮ್ಮದೇ ಸದಾ ಶ್ರೀಮಂತ ಸಂಸ್ಕೃತಿಯ ಒಂದು ಭಾಗ. ಇದ್ ಅಳ್ದ್ ಹೋಕಾಗದ್, ಉಳಿಯೊಕು, ಮೂಲ ಬಾಸೆ ಮತ್ತೆ ಸಂಸ್ಕೃತಿ ಮತ್ತೆ ಬಳಕೆಯಾಕು ಮತ್ತು ಆಚರಣೆಗೆ ಸಿಕ್ಕೋಕು. ನಾವು ಯಾರು ಮುಲಾಜಿಯಿಲ್ಲದೆ ನಮ್ಮ ಬಾಸೆ ಮಾತಾಡುವಂಗೆ ಆಕುತೇಳಿರೆ ಇಂತಹ ಕಾರ್ಯಕ್ರಮ ಅಲ್ಲಲ್ಲಿ ಆಕು. ಮತ್ತೆ ಆಚರಣೆಗ ಅನುಸರಣೆ ಆಕು.

**ಸ್ಮಿತಾ ಅಮೃತರಾಜ್.**

ಬಾಲೆಂಬಿ ಅಂಚೆ, ಚೆಂಬು ಗ್ರಾಮ. ಮೊ. 9980402968

ಚಿಂತನೆ

# ಉಪ್ಪು ತಿಂದವ ನೀರ್ ಕುಡಿಯೋ ಕೇ

ಎಲ್ಲವೂ ಒಂದೇ ಮನೆಲಿ ಇದ್ದರೆ ಎಷ್ಟ್ ಲಾಯ್ಕ್; ಮನೆಗೆ ಶೋಭೆ ಮಕ್ಕಳಿಗೆ ಖುಷಿ. ಕುಟುಂಬಕ್ಕೆ ರಕ್ಷಣೆ, ಹಬ್ಬ ಹರಿದಿನ ಜಾತ್ರೆ ಇಂತಹ ದಿನಗಳಲಿ ಎಲ್ಲವ್ಕೆ ಸಂತೋಷನೇ ಸಂತೋಷ. ಗಮ್ಮತ್ತೇ ಗಮ್ಮತ್. ಮನೆಗೊಂದು ಅಲಂಕಾರ. ಜಗಳ ಮಾಡಿ ಬೇರೆ ಬೇರೆಯಾದರೆ ಪ್ರೀತಿ, ವಿಶ್ವಾಸ, ಬಾಂಧವ್ಯ ಕಳ್ಕೊಂಡವೆ. ಯಾವುದೇ ದಿನ ನೆಮ್ಮದಿ ಇರುದಿಲ್ಲೆ.

ಇದ್ ಮನೆಗೆ ಮಾತ್ರ ಅಲ್ಲ ದೇಶಕ್ಕೆ ಕೂಡ ಅನ್ವಯ ಆದೆ. ಭಾರತ ಮತ್ತ್ ಪಾಕಿಸ್ತಾನ ತುಂಡು ಆಗದೆ ಒಟ್ಟಿಗೆ ಇದ್ದಿದ್ದರೆ ಇಂದ್ ನಾವ್ಗೆ ಸರಿಸಾಟಿ ಯಾರ್ ಇತ್ತ್‌ಲೆ. ಇಬ್ಬರ ಅಧಿಕಾರ ಆಸೆಂದ ಭಾರತ ವಿಭಜನೆ ಆತ್. ನೆಹರು ಮತ್ತ್ ಜಿನ್ನಲಿ ಒಬ್ಬ ತ್ಯಾಗ ಮಾಡಿದರೆ ನಾವು ಒಟ್ಟಿಗೆ ಇರ್ತಿದ್ದೊ. ಪಾಕಿಸ್ತಾನ ಬೇರೆ ಅದರ ಮೇಲೆ ತಾನ್ ಹೆಂಗೆ ಬೆಳೆಯೋಕು ಎಂಬುದರ ಬಗ್ಗೆ ಯೋಚನೆ ಮಾಡ್‌ತ್‌ಲೆ, ಬದಲಾಗಿ ಭಾರತನ ಹೆಂಗೆ ಮಣ್ಣ್ ಮುಕ್ಕುಸುದ್ ಎಂಬುದೇ ಯೋಚನೆ ಮಾಡ್ತ್. ಇದರ್‌ಂದ ಅದರ ಬೆಳವಣಿಗೆ ಆತ್‌ಲೆ ಬದಲಾಗಿ ಅಲ್ಲಿನ ಜನ ಊಟಕ್ಕಾಗಿ ಪರದಾಡ್‌ವ ಸ್ಥಿತಿಬಾತ್.

ಪಾಕಿಸ್ತಾನ ನಮ್ಮ ದೇಶದ ಮೇಲೆ ಭಯೋತ್ಪಾದಕರ ಮತ್ತು ಪುಲ್ವಾಮ ದಾಳಿ ಮಾಡಿಸಿ ನಮ್ಮ 40 ಸೈನಿಕರ ಕೊಂದೊ. ಭಾರತದ ಬೇರೆ ಬೇರೆ ಭಾಗಲಿ ಬಾಂಬ್ ಸ್ಫೋಟ ಮಾಡಿಸಿದ. ಭಾರತದೊಳಗೆ ಭಯೋತ್ಪಾದಕರ ನುಗ್ಗಿಸಿದ. ಇದರ್‌ಂದ ಅಲ್ಲಿ ಲಾಭಂದ ನಷ್ಟನೇ ಜಾಸ್ತಿ ಆತ್. ಭಾರತದ ಬೆಳವಣಿಗೆ ಆತ್. ಬಾಲಕೋಟೆಗೆ ನಮ್ಮ ಯುದ್ಧ ವಿಮಾನ ಹೋಗಿ 200ಕ್ಕೂ ಹೆಚ್ಚು ಭಯೋತ್ಪಾದಕ ಕೊಂದ. ರಾತ್ರಿ 12 ಗಂಟೆ ಹೊತ್ತಿಗೆ ಹೆಲಿಕಾಪ್ಟರ್ ಮೂಲಕ ಸರ್ಜಿಕಲ್ ಸ್ಟ್ರೈಕ್ ಮಾಡಿ ಭಯೋತ್ಪಾದಕರ ಶಿಬಿರ ನಾಶ ಮಾಡ್ದ. ಇಡೀ ಪ್ರಪಂಚನೇ ಭಾರತನ ಬೆಂಗ್‌ಕಣ್ಣ್‌ಂದ ನೋಡುವ ಹಾಂಗೆ ಆತ್.

ಇಂದ್ ಪಾಕಿಸ್ತಾನ ಸ್ಥಿತಿ ಎಲ್ಲಿಗೆ ಬಂದುಟು ಅಂತ ಹೇಳಿರೆ, ಅಲ್ಲಿ ದುಡ್ಡು ಇಲ್ಲೆ. ಜಾಗೆನ ಚೀನಕ್ಕೆ ಮಾರಿಕೆ ಹೊರ್ಟುಟು ಸೈನ್ಯ ಮತ್ತ್ ಪೋಲಿಸರ ಒಳಗೆ ಹ್ಯೊ ಕೈ ಕುರುಂ ಆಗುಟು. ಅಲ್ಲಿನ ಸಂಸತ್‌ಲಿ ಸಚಿವ ಪುಲ್ವಾಮ ದಾಳಿ ಮಾಡಿಸಿದ್ದ್ ಇಮ್ರಾನ್ ಖಾನ್ ಅಂತ ಒಪ್ಪಿಕೊಂಡುಟು ಅಲ್ಲದೆ ಸಂಸತ್‌ನ ಅರ್ಧದಷ್ಟ್ ಸಂಸದಗ ಭಾರತದ ಪ್ರಧಾನಿ ಮೋದಿಗೆ ಜೈ ಹಾಕುವೆ. ಪಾಕಿಸ್ತಾನದ ಬೇರೆ ಬೇರೆ ಪ್ರಾಂತಗೆ ಸ್ವತಂತ್ರ ಆಕೆ ಪ್ರಯತ್ನ ಮಾಡ್ತಾ ಉಟ್ಟು. ನಮ್ಮ ಹಿರಿಯವು ಒಂದು ಗಾದೆ ಮಾತ್ ಹೇಳುವೆ 'ಎಸಂಡ್ ಕೊಂಬು ಎದೆಗೆ ಸೂಲ' ಅಂತ ಹೇಳುವ ಹಂಗೆ ಇಂದ್‌ನ ಪಾಕಿಸ್ತಾನದ ಸ್ಥಿತಿ ಆಗುಟು.

✍ **ಕುಸುಮಾಧರ ಎ.ಟಿ.**
ಅಳಿಕೆಮಜಲು ಮನೆ, ಕಾಯತೋರ್ಡಿ,
ಸುಳ್ಯ. ಮೊ. : 7090133686

ಆರೋಗ್ಯ

# ದಿನದ ಅರ್ಧಗಂಟೆ ನಂಗೆ ಕೊಡಿ ನಾನು ನಿಮ್ಮ ಆರೋಗ್ಯನ ಕಾಪಾಡ್‌ನೇ - ವ್ಯಾಯಾಮ.

ಭೂಮಿ ಮೇಲೆ ಹುಟ್ಟಿದ ಎಲ್ಲವೂ ಕೂಡ ಒಳ್ಳೆಯ ಆರೋಗ್ಯಂದ ಇರಿಕೆ ಬಯಸುವೆ. ಎಷ್ಟು ಸಂಪತ್ತ್ ಇದ್ದರೂ ಕೂಡ ಒಳ್ಳೆಯ ಆರೋಗ್ಯ ಇಲ್ಲದಿದ್ದರೆ ಎಲ್ಲವೂ ಕೂಡ ಶೂನ್ಯ. ನಾವು ಮೊದಲು ಆರೋಗ್ಯ ಸಂಪಾದಿಸಿಕೊಳ್ಳಕು. ಹೆಚ್ಚಿನವು ಇಂದ್ ಕೂಡ ಅಂದ್‌ಕೊಂಡೊಳು ಆರೋಗ್ಯ ಸಿಕ್ಕದು ಕೇವಲ ಔಷಧಿ ಮಾತ್ರೆಂದ ಮಾತ್ರ. ಇದು ನಮ್ಮ ತಪ್ಪು ಕಲ್ಪನೆ. ನಾವು ದಿನದ ಅರ್ಧಗಂಟೆನಾ ಕ್ರೀಡೆ, ವ್ಯಾಯಾಮಕ್ಕೆ ತೊಡಗಿಸಿಕೊಂಡರೆ ನಾವ್ ಉತ್ತಮ ಆರೋಗ್ಯನ ಕಾಪಾಡಕ ಅಲ್ಲದೆ ಅನೇಕ ರೀತಿಯ ರೋಗ ರುಜಿನಗಳ್‌ಂದ ಹೊರ ಬರೋಕ್. ದಿನದ ಅರ್ಧಗಂಟೆನ ನಾವು ನಡಿಗೆ, ಜಾಗಿಂಗ್, ಕ್ರೀಡೆಲಿ ತೊಡಗಿಸಿಕಂಡ್ರೆ ಒಳ್ಳೆ ಆರೋಗ್ಯನ ಸುಲಭಲಿ ಕಾಪಾಡಕ್. ಬೆಳ್ಗಿನ ನಡಿಗೆಂದ ನಮ್ಗೆ ಉತ್ತಮ ಗಾಳಿನ, ಜೊತೆಗೆ ದೇಹದ ಎಲ್ಲ ಅಂಗಾಂಗಳ್ಗೆ ಹಿತಮಿತವಾದ ವ್ಯಾಯಮ ಸಿಕ್ಕಿ ದೇಹದ ಕಲ್ಮಶ ವಿಷಯುಕ್ತ ಪದಾರ್ಥ ಬೆವರ್‌ನ ರೂಪಲಿ ನಮ್ಮ ದೇಹಂದ ಹೊರಗೆ ಬಂದದೆ. ಇದರ್‌ಂದಾಗಿ ನಮ್ಮ ದೇಹ ಹೆಚ್ಚಿನ ರೋಗ ನಿರೋಧಕ ಶಕ್ತಿನ ಪಡ್‌ದದೆ ಹಂಗೆ ನಮಗೆ ಚಿಕ್ಕಪುಟ್ಟ ಕಾಯಿಲೆ ಬಂದರೂ ಕೂಡ ನಾವು ಸುಲಭವಾಗಿ ಗುಣಮುಖವಾದವೆ. ನಾನ್ ಇಲ್ಲಿ ನಿಮ್ಗೆ ಒಂದ್ ಉದಾರಣೆ ಕೊಟ್ಟನೆ. ರೈತ ಮತ್ತೆ ಉದ್ಯೋಗಸ್ಥ. ಇವರ್‌ಲಿ ಯಾರು ಜಾಸ್ತಿ ಆರೋಗ್ಯನ ಹೊಂದ್ಯೊಳೊಂತ ನೋಡಿರೆ ನಾವು ಖಂಡಿತ ರೈತಂತ ಹೇಳಕ್. ಯಾಕೆಂದರೆ ರೈತ ಸದಾ ಕೃಷಿ ಚಟುವಟಿಕೆಯಲ್ಲಿ ತನ್ನನ್ನ ತೋರಿಸಿಕೊಂಡದೇ. ಅವ ತನಗೆ ಗೊತ್ತಿಲ್ಲದೆ ಅನೇಕ ರೀತಿಯ ವ್ಯಾಯಾಮನ ಕೃಷಿ ಚಟುವಟಿಕೆಲಿ ಮಾಡ್ದೆ. ಅದೇ ಉಳುಮೆ ಮಾಡ್ದು, ನಾಟಿ ನಡ್ದು, ಹಾಲ್ ಕರೆಯೋದು, ಗುದ್ದಲಿ ಕೆಲಸ ಮಾಡೋದು ಇದರಿಂದಾಗಿ ರೈತ ಸದಾ ಫಿಟ್ ಇದ್ದದೇ. ಆದರೆ ನೌಕರಿಯಲ್ಲಿನ ಜನ ನಮ್ಮ ರೈತಂಗೆ ಹೋಲಿಸಿರೆ ಹೇಳಿಕೊಳ್ಳುವಂತಹ ಫಿಟ್ನೆಸ್ ಇರುದಲೆ. ರೈತ ಎಂದು ಕೂಡ ಜಾಸ್ತಿ ದಪ್ಪ ಇರದೆ ಬಹಳ ಗಟ್ಟಿಯಾಗಿದ್ದದೆ. ನಾವು ಗಟ್ಟಿ ಮನಸ್ಸು ಮಾಡಿಕೊಂಡು ದಿನದ ಅರ್ಧಗಂಟೆನಾ ವ್ಯಾಯಾಮ, ಯೋಗಕ್ಕೆ ಮೀಸಲಿಡಕು. ಬೆಳಿಗ್ಗೆ ಬೇಗನೆ ಎದ್ರುವ ಪದ್ಧತಿನ ಬೆಳ್ಸಿಕಂಡ್, ಮನಸ್ಸಿನ ಮೇಲೆ ನಿಯಂತ್ರಣ ಹೇರಿಕಂಡ, ನಿಧಾನವಾಗಿ ವ್ಯಾಯಾಮನ ಮಾಡುವ ನಿರ್ಧಾರನ ಕೈಗೊಳ್ಳೊಕು. ನಾವು ಪ್ರತಿದಿನ ವ್ಯಾಯಮ ಮಾಡುದರ್‌ಂದ ಶಿಸ್ತುಬದ್ಧವಾದ ಜೀವನನ ನಾವು ಸುಲಭವಾಗಿ ರೂಪಿಸಿಕೊಳ್ಳೊಕು. ಮತ್ತೆ ಮುಖ್ಯವಾಗಿ ದಿನಪೂರ್ತಿ ನಾವು ಬಹಳ ಲವಲವಿಕೆಂದ ಇರಕ್. ನಾನು ಇಲ್ಲಿ ಒಂದು ಉದಾಹರಣೆ ಕೊಟ್ನೆ. ಪ್ರಾಣಿ-ಪಕ್ಷಿಗ ಕೂಡ ಬೆಳಿಗ್ಗೆ ಎದ್ದಂಗೆ ಒಂದು ರೀತಿಯ ವ್ಯಾಯಾಮನ ಮಾಡುವೆ. ಹಿಂದಕ್ಕೆ ಮುಂದಕ್ಕೆ ಬಾಗದು. ಮೇಲೆ ನೋಡ್ದು ಇವೆಲ್ಲವೂ ಕೂಡ ವ್ಯಾಯಾಮದ ಭಾಗವೇ. ದನ, ಎಮ್ಮೆ, ನಾಯಿಗ ಕೂಡ ಬೆಳಿಗ್ಗೆ

ಎದ್ದ ಕೂಡ್ಲೆ ವ್ಯಾಯಾಮನ ಮಾಡುವೆ. ನಂತರ ನಿಧಾನಗತಿಲಿ ನಡಿಗೆ ಮಾಡುವೆ ಮೂಕ ಪ್ರಾಣಿಗಳೇ ಆರೋಗ್ಯದ ಬಗ್ಗೆ ಇಷ್ಟೊಂದು ಕಾಳಜಿ ಮಾಡುವೆ. ಆದರೆ ಬುದ್ಧಿಜೀವಿ ಮಾನವ ಮಾತ್ರ ಆರೋಗ್ಯದ ಬಗ್ಗೆ ಏಕೆ ಇಷ್ಟೊಂದು ಅಸಡ್ಡೆ ಮಾಡುವೆ. ಎಲ್ಲಾನ ವಿಮರ್ಶೆ ಮಾಡುವ ಕಾಲ ಇಂದ್ ಬಂದುಟು. ಇಂದಿನ ನಮ್ಮ ಜಂಜಾಟದ ಬದ್‌ಕ್‌ಲಿ ನಾವು ಆರೋಗ್ಯನ ಕಡೆಗಣಿಸಿಕೆ ಆಗದ್ ಅಂತ ಹೇಳಿರೆ ಇದ್ ಅಕ್ಷರಸಹ ಸತ್ಯ. ಇಂದಿನ ನಮ್ಮ ಜಗತ್ತು ಹೆಂಗುಟೂಂತ ನೋಡಿರೆ ಸಣ್ಣ ಮಕ್ಕ ಮೊಬೈಲ್ ಗೇಮ್‌ಲಿ ಬಿಜಿಯಾಗಿದ್ದವೆ. ಕಾಲೇಜ್ ಹೈದಗ ಬೈಕ್ ಕಾರ್ ವ್ಯಾಮೋಹಲಿ ಇದ್ದವೆ. ಕಾಲೇಜು ಗೂಡೇಗ ಜಾಸ್ತಿ ಅಂದವಾಗಿ ಕಾಣುಕುತ ಜಾಸ್ತಿ ಹೊತ್ತು ಕನ್ನಡಿಯ ಮುಂದೆ ಇದ್ದವೆ. ಅಮ್ಮಂದಿರ್ ಇಂದ್ ಯಾವ ಸಾಂಬಾರ್. ಪಲ್ಯ ಮಾಡೋಕು ಎಂಬ ಚಿಂತೆಲಿ ಇದ್ದರೆ ಅಪ್ಪ ಮಾತ್ರ ಹಗಲಿರುಳು ದುಡಿದು ಸುಸ್ತಾಗಿ ಬಂದ್ ಮನೇಲಿ ಇದ್ದವೆ. ಎಲ್ಲರನ್ನು ಕೇಳಿರೆ ನಮಗೆ ಒಂದೇ ಉತ್ತರ ಬಂದದೆ. ಅದೇ ತುಂಬಾ ಬಿಸೀ ಒಳೆಂತ ಉತ್ತರ ಕೊಟ್ಟವೆ. ಇನ್ನೆಲ್ಲಿಂದ ವ್ಯಾಯಾಮಕ್ಕೆ ಸಮಯನ ಕೊಟ್ಟವೆ. ನಾನು ಈ ಕೆಳಗೆ ಕೆಲವೊಂದು ಸರಳ ರೀತಿಯ ವ್ಯಾಯಾಮನ ವಿವರಿಸಿನೇ ಇದನ್ನ ದಿನಪ್ರತಿ ನೀವು ಮಾಡಿರೆ ನೀವ್ ಕೂಡ ಒಳ್ಳೆಯ ಆರೋಗ್ಯನ ಹೊಂದಕು.

1 ಅಂಗಾಲ್‌ನ ಎಡಂದ ಬಲಕ್ಕೆ ಬಲಂದ ಎಡಕ್ಕೆ 10 ಸರ್ರಿ ತಿರ್‌ಗುಸುದು

2 ಸೊಂಟನ ಎಡಂದ ಬಲಕ್ಕೆ ಬಲಂದ ಎಡಕ್ಕೆ ಹತ್ತು ಸರ್ರಿ ತಿರ್‌ಗುಸುದು.

3 ಭುಜನ ಹತ್ತು ಸರ್ರಿ ಹಿಂದಕ್ಕೆ ಮುಂದಕ್ಕೆ ತಿರ್‌ಗುಸುದು.

4 ಎರಡು ಕೈನ ಹತ್ತು ಸರ್ರಿ ಹಿಂದಕ್ಕೂ ಮುಂದಕ್ಕೂ ತಿರ್‌ಗುಸುದು.

5 ಕುತ್ತಿಗೆನ ಎಡಂದ ಬಲಕ್ಕೆ ಮತ್ತೆ ಬಲಂದ ಎಡಕ್ಕೆ 10 ಸರ್ರಿ ತಿರ್‌ಗುಸುದು.

6 ದೇಹನ ಮುಂದಕ್ಕೆ ಬಾಗಿಸಿ ಎರಡು ಕೈಗಳ್ನ ನೆಲಕ್ಕೆ ತಾಗಿಸುದು.

7 ಕಾಲನ್ನು ಅಗಲಿಸಿ ಎಡಗೈ ಬಲ ಪಾದಕ್ಕೆ ಬಲಗೈಯನ್ನು ಎಡ ಪಾದಕ್ಕೆ ಹತ್ತು ಸಾರಿ ತಾಗಿಸುದು. 8 ಎರಡು ನಿಮಿಷ ಹಾರ್ತಾ ಮೊಣಕಾಲ್‌ನ ಎದೆ ಮೇಲೆ ತರುದು.

9 ಪುಶ್ ಅಪ್ ತೋಳುಗಳ ಸಹಾಯಂದ ಕೆಳಗೆ ಬಂದ್ ಮೇಲಕ್ಕೆ ಬಾದು. ಹೀಗೆ ಹತ್ತು ಸರ್ರಿ ಮಾಡ್ದು. 10 ಹತ್ತು ನಿಮಿಷ ನಿಂತಲ್ಲೇ ಜಾಗಿಂಗ್ ಮಾಡ್ದು.

11 ಸ್ಕಿಪ್ಪಿಂಗ್ ಮಾಡ್ದು. ಮೇಲೆ ತಿಳಿಸಿದ ಕೆಲವನ್ನು ಮಾಡಿರೆ ನಾವು ಒಳ್ಳೆಯ ಆರೋಗ್ಯನ ಹೊಂದಕ್. ಆರೋಗ್ಯವೇ ಭಾಗ್ಯ ನಾವು ಪ್ರತಿದಿನ ವ್ಯಾಯಾಮ ತೊಡಗಿಸಿಕೊಂಡರೆ ನಮ್ಮಲ್ಲಿ ರೋಗನಿರೋಧಕ ಶಕ್ತಿ ಜಾಸ್ತಿಯಾಗಿ ಹೆಚ್ಚಿನ ಮಟ್ಟದ ಆರೋಗ್ಯನ ಹೊಂದಕ್. ಮತ್ತೆ ಮುಖ್ಯವಾಗಿ ಆರೋಗ್ಯವಂತ ಸಮಾಜನ ಸೃಷ್ಟಿ ಮಾಡಕ್ ಅಂತ ಹೇಳ್ತಾ ಈ ಲೇಖನಕ್ಕೆ ವಿರಾಮ ಕೊಟ್ಟನೆ.

✍ **ಡಾ. ಈಶ್ವರ ಕರ್ಣಯನ**
ಅಂತರಾಷ್ಟ್ರೀಯ ಕ್ರೀಡಾಪಟು
ಸಹಾಯಕ ಪ್ರಾಧ್ಯಾಪಕರು
ಅರಣ್ಯ ಮಹಾವಿದ್ಯಾಲಯ, ಪೊನ್ನಂಪೇಟೆ
ಮೊ. : 7349242442

# ನಮ್ಮ ಆರೋಗ್ಯ ನಮ್ಮ ಕೈಲಿ

ಪ್ರತಿ ದಿನ ಪ್ರತಿ ಕ್ಷಣ ಮನ್ಸ ಬೇರೆ ಬೇರೆ ನಮೂನೆನ ಸೋಂಕುಗಳ್‌ಂದ, ಕಾಯಿಲೆಗಳ್‌ಂದ ಪೇಚಾಡಿಕಂಡ್, ಸಂಕಟಪಟ್ಟ್ ಕಂಡ್ ಇದ್ದವೆ. ಈ ಸಂಕಟಗಳ್ಲದೆ ಆರೋಗ್ಯಲಿ ಬೊದ್ಕೊಕುಂತಾದರೆ ನಮ್ಮ ಹಿರಾಕ್ನ ಆರೋಗ್ಯ ಪೊದ್ಧತಿಗಳ ಬೊವ್ವಲಿ ಅಳವಡ್ಸಿಕಣಕು. ಇಂದ್ನ ಕೆಲವು ಕೊರೋನಾದಂತ ಕಾಯಿಲೆಗಳ್ಳಿಂದ ಮನ್ಸ ಆಯುರ್ವೇದದ ಕಡೆ ಮೋರೆ ಮಾಡ್ತರ ನೋಡಕ್. ಆಯುರ್ವೇದಂತ ಹೇಳ್ರೆ ಆಯು: + ವೇದ. ಜೀವ ವಿಜ್ಞಾನ ಇದರ್ನೇ ಮನ್ಸನ ಜೀವನ ವಿಜ್ಞಾನ - ಬೊದ್ಕೊವ ವಿಜ್ಞಾನಂತ ಹೇಳಕ್. ಆಯುರ್ವೇದ ಬಾರೀ ಹಿರಾಕ್ನ ಕಾಯಿಲೆಗಳ ಗುಣಪಡ್ಸುವ ವೈದ ಪೊದ್ಧತಿ. ಇದ್ ಸುಮಾರ್ ಐದ್ ಸಾವ್ರ ವರ್ಸಗಳ್‌ಂದಲೂ ಹಿಂದೆ ನಮ್ಮ ಭಾರತ ದೇಸಲಿ ಇದ್ದ ವೈದ ಪೊದ್ಧತಿ. ಇದ್ ಇಂದ್ನ ಎಲ್ಲಾ ವೈದ ಪೊದ್ಧತಿಗಳಿಗೆ ತಾಯಿ. ಆಯುರ್ವೇದಲಿ ಸುಶ್ರುತರ "ಶಸ್ತ್ರಚಿಕಿತ್ಸಾ ಪಿತಾಮಹಾ" ಂತ ಕರ್ದವೆ. ಚರಕ, ವಾಗ್ಭಟರ್ ಕೂಡಾ ಆಯುರ್ವೇದದ ಪ್ರಖ್ಯಾತ ವೈದ್ಯರ್‌ಂತ ಗುರ್ತಿಸಿಕಂಡವೆ.

ಇಂತಾ ಹಿರಾಕ್ನ ಆಯುರ್ವೇದ ಪೊದ್ಧತಿಂದ ಮನ್ಸನ ಆರೋಗ್ಯನ ಹೇಂಗೆ ಕಾಪಾಡಿಕಣಕ್‌ಂತ ಗೇನ ಮಾಡುವ ಕಾಲ ಬಂದುಟು. ಈಗನ ಮನ್ಸರ ಜೀವನ ಪೊದ್ದತಿಲಿ ಕಾಂಬ ಕಾಯಿಲೆಗಾಂತ ಹೇಳ್ರೆ:-

1.ಸಕ್ಕರೆ ಕಾಯಿಲೆ. 2.ಅತಿರಕ್ತದ ಒತ್ತಡ. 3.ಬೊಜ್ಜುನ ತೊಂದರೆ. 4.ವಿಪರೀತ ಸರೀರದ ತೂಕ. 5.ರಕ್ತಲಿ ಕೊಬ್ಬುನ ಅಂಸ ಹೆಚ್ಚಿದ್ದರ್. ಈ ಎಲ್ಲಾ ತೊಂದರೆಗಳ ಒಟ್ಟಲಿ "ಮೆಟಬಾಲಿಕ್ ಸಿಂಡ್ರೋಮ್" ಂತ ಕರ್ದವೆ. ಇದರ್ಲಿ ಯಾವುದೇ ಒಂದು ಕಾಯಿಲೆ ಇದ್ದರೂ ಹೃದಯಾಘಾತ, ಪಾರ್ಶ್ವವಾಯು, ಕಿಡ್ನಿ ವೈಫಲ್ಯದಂತ ದೊಡ್ಡ ದೊಡ್ಡ ತೊಂದರೆಗಳಿಗೆ ಕಾರಣ ಆದೆ. ಇಂದ್ನ ಆಧುನಿಕ ಆರೋಗ್ಯ ಪೊದ್ಧತಿ ಇಸ್ಟ್ ಮುಂದುವರ್ದರೂ ಕೂಡಾ ಭಾರತನ ವಿಸ್ವನ ಸಕ್ಕರೆ ಕಾಯಿಲೆನ ಕೇಂದ್ರಂತ ಕರ್ದವೆ. ಇಂತ ಕಾಯಿಲೆಗಳ ಬಾರದ ಹಾಂಗೆ ತಡಿಯೊಕುಂತಾದರೆ ಮುಖ್ಯ ನಮ್ಮ ಜೀವನ ರೀತಿನ ಬದ್ಲಾವಣೆ ಮಾಡಿಕಂಬೊದು ಅನಿವಾರ್ಯವಾದೆ. ನಾವು ತಿಂಬ ಆಹಾರಗ ನಮ್ಮ ಸರೀರದ ಕೆಲ್ಸಗಳ ಮಾಡಿಕೆ ಬೇಕಾದ ಸಕ್ತಿಯಾಗಿ ಪರಿವರ್ತನೆಯಾದೆ. ಸಮತೋಲನದ ಆಹಾರ ವಿಹಾರ ಇದ್ದರೆ ಮಾತ್ರ ಮೇಲೆ ಹೇಳ್ದ ಕಾಯಿಲೆಗಳ ಸುಲ್ಭಲಿ ಬಾರದಾಂಗೆ ತಡಿಯಕ್.

ನಾವು ಯಾಗೊಳು ಕಾಲಿ ಹೊಟ್ಟೆಲಿ ಸರೀರ ವ್ಯಾಯಾಮಗಳ ಮಾಡ್ದು ಅತಿ ಅಗತ್ಯ. ಇದರೊಟ್ಟಿಗೆ ನಾವು ತಿಂಬ ಆಹಾರ ಸುಲ್ಭಲಿ ಅರ್ಗುವಾಂಗೆ ಇರೊಕು. ಹಂಗಾಗಿ ನಮ್ಮ ಆರೋಗ್ಯನ ಕಾಪಾಡಿಕೆ ಇಲ್ಲಿ ತಿಳ್ಸಿದ ಆಹಾರಗಳ ದಿನೊಳು ಉಂಬಕೆ ತಿಂಬಕೆ ಅಳವಡ್ಸಿಕಣಕು.

1. ದವಸ ದಾನ್ಯಗ:- ಕೊಸ್ಲಕ್ಕಿ, ಗೋದಿ, ಬಾರ್ಲಿ, ರಾಗಿ, ನವಣೆ, ತೊಕ್ಕೆ ಗೋದಿ (ಓಟ್ಸ್) ತೌಡು ತೆಗೆಯದ ದಾನ್ಯಗಳ ಬಳ್ಸುದು ಒಳ್ಳೆದ್. ಇದರೆಲ್ಲಾ ಎಣ್ಣೆ ಹಾಕದೆ

ಜೇಸಿ ಉಪಯೋಗ್ಲೊಕು. ಪೆಣ್ತಿಕ್ಕಿ, ಮೈದದ ಉಪಯೋಗ ಆದಸ್ಟ್ ಕಮ್ಮಿ ಮಾಡೊಕು.
2. ತರಕಾರಿಗ:- ನಾವೇ ಬೆಳ್ದ, ಸಾವಯುವ ತರಕಾರಿಗ ಆದರೆ ಒಳ್ಳೆದ್ ಅದರ ಜೇಸಿ/ ಕುಕ್ಕರ್ಲಿ/ ಸಕೆಲಿ (ಹಬೆಲಿ) ಜೇಸಿ ಉಪಯೋಗ್ಲೊಕು.
3. ಜೇಳೆ ಕಾಳ್ಗ :- ಪ್ರೋಟೀನ್ ನಂಶ ಜೇಳೆಕಾಳ್ ಗಳ್ಲಿ ತುಂಬಾ ಇದ್ದದೆ, ಹಂಗಾಗಿ ಜೇಳೆಕಾಳ್ಗಳ ತಿನ್ನೊಕು. ಅದಲ್ಲೂ ಪದೆಂಜಿ ತುಂಬಾ ಒಳ್ಳೆದ್. ಆದರೆ ಉದ್ದುನ ಮಾತ್ರ ಆದಸ್ಟ್ ಕಮ್ಮಿ ಉಪಯೋಗ್ಲೊಕು.
4. ಸಂಬಾರ ಪದಾರ್ತಗ:- ನಮ್ಮ ದೇಸಲಿ ಬೆಳೆವ ಸಂಬಾರಗ ಆದ ಅರ್ಸಿನ, ಸುಂಟಿ, ಒಳ್ಳೆಮೆಣ್ಸ್, ಚಕ್ಕೆ, ಲವಂಗ, ಕರಿಬೇವುಗಳ ಅಡ್ಗೆಲಿ ಆದಸ್ಟ್ ಬಳ್ಸುದು ಒಳ್ಳೆದ್.
5. ಹಾಲ್ ಮತ್ತೆ ಅದರ ಉತ್ಪನ್ನಗ:- ಇದರ್ಲಿ ತುಪ್ಪನ ಅಡ್ಗೆಲಿ ಹೆಚ್ಚಿ ಉಪಯೋಗ್ಸಕ್. ಆದರೆ ಹಾಲ್, ಮೊಸ್ರ್ ಮಜ್ಜಿಗೆ, ಪನ್ನೀರ್, ಚೀಸ್ಗಳ ಮಿತಲಿ ಉಪಯೋಗ್ಲೊಕು.
6. ಎಣ್ಣೆಗ:- ಯಾವುದೇ ಸಂಸ್ಕರ್ಸಿದ (ರೀಫೈಂಡ್) ಎಣ್ಣೆಗಳ ಉಪಯೋಗ್ಸಿಕೇ ಆಗದ್. ಸರೀರದ ಕೆಲ್ಸ ಹೆಚ್ಚಿ ಮಾಡೊವು, ಆರೋಗ್ಯ ಲಾಯಿಕ್ಲಿ ಇರೊವು ಕಾಯಿ ಎಣ್ಣೆ (ತೆಂಗಿನೆಣ್ಣೆ)ನ ಅಡಿಗೆಗೆ ಉಪಯೋಗ್ಸಕ್.
7. ಉಪ್ಪುಗ:- ಪೇಟೆಲಿ ಸಿಕ್ಕುವ ಕಲ್ಲ್ ಉಪ್ಪು, ಹೊಡಿ ಉಪ್ಪು ಒಳ್ಳೆದಲ್ಲ. ಅದರ ಬದ್ಲಿಗೆ ಸೈಂದವ ಲವಣ (ರಾಕ್ ಸಾಲ್ಟ್/ಪಿಂಕ್ ಸಾಲ್ಟ್) ಒಳ್ಳೆದ್.
8. ಸಕ್ಕರೆ ಬೆಲ್ಲ:- ಸಾಮಾನ್ಯ ಸಕ್ಕರೆಂದ ತಾಳೆ (ಪಾಮ್) ಸಕ್ಕರೆ ಒಳ್ಳೆದ್. ಮಕ್ಕಳಿಗೆ ಸುದ್ದ ಬೆಲ್ಲನ ಉಪಯೋಗ್ಸಕ್.
9. ಹಣ್ಣು ಹಂಪಲ್ಗ:- ಹಣ್ಣ್ ಗಳ ಒಣ್ಗಿದ ಹಣ್ಣ್ ಗ, ಹಸಿ ತರ್ಕಾರಿಗ, ಮುಂಗೆ ಬರ್ಸಿದ ಕಾಳ್ಗ ನಿಂಬುಳಿ ಇವುಗಳೆಲ್ಲಾ ಎಲ್ಲವೂ ಅವರವರ ಕಾಯಿಲೆಗಳ ತಿಳ್ಕಂಡ್ ಉಪಯೋಗ್ಲೊಕು.
10. ನೀರ್ :- ಕುಡಿವ ನೀರ್ನ ಫಿಲ್ಟರ್ ಮಾಡ್ದಾದರೂ ಕೊದ್ಸಿಯೇ ಕುಡಿಯೊಕು. ಮೊದ್ದುನ ಬೇರ್, ಕೆತ್ತೆ, ದಂಟ್, ಸೊಪ್ಪುಗಳ ಹಾಕಿ ಕೊದ್ಸಿದ ನೀರ್ನ ಅವರವರ ಕಾಯಿಲೆಗಳಿಗೆ ಪತ್ಯವಾದರ ಮಾತ್ರ ಕುಡಿಯೊದು ಒಳ್ಳೆದ್.
11. ಹುಳಿ ಬರ್ಸಿ ಮಾಡ್ದ ತಿಂಡಿಗ:- ಇಡ್ಲಿ, ದೋಸೆ, ವಡೆ, ಬ್ರೆಡ್, ಬನ್ಸ್ ಮೊದ್ಲಾದರ ಉಪ್ಪನಕಾಯಿನ ಎಲ್ಲಾ ಮಿತಮಿತಲಿ ಬಳ್ಸುದು ಒಳ್ಳೆದ್.
12. ಜಂಕ್ ಫುಡ್ :- ಪಾನಿಪೂರಿ, ಗೋಬಿಮಂಚೂರಿ, ಬಿಸ್ಕೇಟ್, ಚಾಕ್ಲೇಟ್, ಕೇಕ್, ಸಮೋಸ, ಎಣ್ಣೆಲಿ ಕಾಸಿದ ತಿಂಡಿಗ ಬಜ್ಜಿ ಬೋಂಡ,ವಡೆ, ಪೂರಿ ಮೊದ್ಲಾದರ ಸಂಪೂರ್ಣ ಬುಡೊಕು.
13. ಅಮಲ್ ಪದಾರ್ತಗ:- ಮದ್ಯಪಾನ, ದೂಮಪಾನ, ಹೊಸೆಪುನ ಉಪಯೋಗಗಳ ಮಾಡಿಕ. ಆಗದ್.

ದಿನ ನಿತ್ಯ ಮಾಡಕಾದ ವ್ಯಾಯಾಮಗ:-

1. ಸೂರ್ಯ ನಮಸ್ಕಾರ.

2. ಜೋರ್ನ ನಡಿಗೆ (ಅರುವತ್ತ್ ವರ್ಸಂದ ಮೇಲೆನವುಕೆ)
3. ಓಡುದು ಅಥವಾ ಜಾಗಿಂಗ್.
4. ಮೆಟ್ಲ್ ಗಳ ಹತ್ತಿ ಇಳಿಯೊದು.
5. ಝುಂಬ
6. ಏರೋಬಿಕ್ಸ್
7. ಸ್ಕಿಪ್ಪಿಂಗ್.
8. ಇಪ್ಪತ್ತ್ ನಿಮ್ಸ ಎಡೆಬುಡದೆ ಕುದ್ದ್ ಎದುರ್ದು (ಸಿಟ್ಟಪ್ಸ್)
9. ಆಟಗ – ಬ್ಯಾಡ್ ಮಿಂಟನ್, ಟೆನ್ನೀಸ್ ಮೊದ್ಲಾದ್.

ಇವುಗಳ ದಿನೋಳು ಬೊಳ್ಬ್ರಗೆ, ಹಿಂಜೊತು ದಿನಕ್ಕೆ ಎರ್ಡ್ ಸತ್ತಿ ಕಾಲಿ ಹೊಟ್ಟೆಲಿ ಮಾಡೊಕು.

**ಸಾಮಾನ್ಯ ಸಲೆಹಗ :–**

1. ಹೊಟ್ಟೆ ಹಸ್ತ ಮೇಲೆನೇ ಉಣೊಕಾದ್ದ್ ಅತಿ ಅಗತ್ಯ.
2. ಅವರವರ ಜೀರ್ಣಸಕ್ತಿಗೆ ಸರಿಯಾಗಿ ಎಸ್ಟ್ ಉಣಕ್ ತಿನಕ್ಂತ ಹೇಳ್ಟರ ಅವವೇ ನಿರ್ದಾರ ಮಾಡಿಕಣೊಕು.
3. ಕತ್ತಲೆನ ಊಟ ಕಮ್ಮಿ ಇರೊಕು. ಬೊಳ್ಬ್ರಗೆ ರಾಜನಾಂಗೆ, ಮದ್ಯಾಹ್ನ ರಾಜಕುಮಾರನಾಂಗೆ ಕತ್ತಲೆಗೆ ಸನ್ಯಾಸಿನಾಂಗೆ ಉಣೊಕುಂತ ಹೇಳ್ತೆ.
4. ಎಲ್ಲಾ ಬಗೆಗಳ ಒಟ್ಟಿಗೇ ತಿಂಬ (ಸಂಕೀರ್ಣ ಬೋಜನ) ಕ್ರಮ ಇರಿಕೆ ಆಗದ್
5. ಉಂಡ ಮೇಲೆ ಯಾವುದೇ ಸಿಂಯಿ ತಿಂಬಕೆ ಆಗದ್.
6. ಉಂಬಕನ ಹಂಜ ಹಂಜನೇ ಬಿಸಿ ನೀರ್ ಕುಡ್ದರೆ ಜೀರ್ಣ ಆಕೆ ಒಳ್ಳೆದ್.
7. ಹಗಲ್ ಹೊತ್ತು ನಿದ್ದೆ ಮಾಡ್ದು ಒಳ್ಳೆದ್ ಅಲ್ಲ.

ಈ ಮೇಲೆನ ಆಹಾರ ವಿಹಾರ ನಿಯಮಗಳ ರೋಗ ಸುರು ಆಕನೇ ಅನುಸರ್ಸಿರೆ ಬೇಗ ಗುಣಪಡ್ಲಕ್. ಅಲ್ಲದೆ SBEBA (Science Based Evidence Based Ayurveda ) ಚಿಕಿತ್ಸೆಲಿ ಅತೀ ಕಮ್ಮಿ ಮೊದ್ದುಂದ ರೋಗ ಮುಕ್ತರಾಕ್. ಅಲ್ಲದೆ ಈ ಮೆಟಬಾಲಿಕ್ ಸಿಂಡ್ರೋಮ್ಂದ ಆವ ಆರೋಗ್ಯ ಹಾನಿಗಳ (Health Complications) ತಡಿಯಕ್. ಕೊರೊನಾದಂತ ಎಂತಾ ವೈರಸ್ ಬಂದರೂ ಅದರ ಸುಲ್ಬಲಿ ಎದ್ರ್‌ಸಿ ನಾಸ ಮಾಡುವ ಸಕ್ತಿ ನಮ್ಮದಾದೆ. ತೊಂಬತ್ತ್ ನೂರು ವರ್ಸ ಆರೋಗ್ಯಲಿ ಬೊದುಕುವಾಂಗೆ ಆದೆ. ಅಂತಾ ದೀರ್ಘಾಯುಷ್ಯ ನಮ್ಮದಾಗಲೀಂತ ಆ ಧನ್ವಂತರಿ ಅನುಗ್ರಹಿಸಲಿಂತ ಹಾರೈಸೊಮ.

✍ ಡಾ॥ ನಿವೇದಿತಾ ಎ.ಪಿ.
ಸ್ವಸ್ಥ ಆಯುರ್ವೇದ, SBEBA ವೈದ್ಯರು,
# 131, 8ನೇ ಕ್ರಾಸ್, ಎಂಸಿಇಸಿಹೆಚ್ಎಸ್ ಬಡಾವಣೆ,
ಶಿವರಾಮ ಕಾರಂತ ನಗರ, ಬೆಂಗಳೂರು,
ಮೊ.ಸಂ : 7760873091

**ಕತಾ ಜೊಂಪೆ**

# ಕಾಡ್ ಬೀರ

ದೊಡ್ಡ ಕಾಡು ಗುಡ್ಡೆ ಕೆಳಗಡೆ ಎರಡೇ ಎರಡೇ ಕುಳಗ ಇದ್ದೋ. ಮನೆ ಹುಲ್ಲು ಮನೆ. ಜೋರಾಗಿ ಗಾಳಿ ಬಂದರೆ ಹಾರಿ ಹೋಗುವಂಗೆ ಇತ್ತ್. ಎರಡ್ ಮನೆಗ ಎದ್ರ ಬದ್ರ ಇತ್ತ್. ಎರಡ್ ಮನೆಲಿ ಒಬ್ಬೊಬ್ಬರೇ ಮಕ್ಕ. ಈಚೆ ಮನೇಲಿ ಚಾಮಿ ಆಚೆ ಮನೇಲಿ ಇರವ ರಾಂಪ. ಸಣ್ಣತರಿಂದನೇ ಒಟ್ಟಿಗೆ ಆಡಿ ಬೆಳ್ದವು. ಗುಡ್ಡೆಗೆ ಒಟ್ಟಿಗೆ ಬ್ಯಾಟೆಗೆ ಹೋಗ್ತಿದ್ದವು. ಒಟ್ಟಾರೆ ಹೇಳೋಕು ತೇಳ್ರೇ ಚಾರಿ ಒಳ್ಳ ಚಡ್ಡಿದೋಸ್ತ್‌ಗ ನೀರ್ ಮೀನ್ ನಂಗೆ ಇದ್ದವು. ಒಂದು ದಿನ ಚಾಮಿ ಬಂದ್ ರಾಂಪಂಗೆ ಹೇಳ್ತ್ ಗುಡ್ಡೆಗೆ ಬ್ಯಾಟೆಗೆ ಹೋಗದೆ ಸುಮಾರ್ ದಿನ ಅತ್. ಇಂದ್ ಹೋಗಿ ಬರೋಮಾ ತಾ ಕೇಳ್ತ್. ರಾಂಪಂಗ ಅದೇ ಬೇಕಾಗಿತ್ತ್. ತೋಟೆಕೋವಿ. ದೊಂದಿ ಸೂಟೆ. ಕಳ್ ಕುಪ್ಪಿ ಎಲ್ಲ ಜೋಡ್ಸಿಕಂಡ್ ಸಾಯಂಕಾಲ ಹೊರ್ಟ್ ಬುಟ್ಟೊ. ಬಿಸಿ ರಕ್ತದ ಹೈದಗ, ಅವ್ವ ಅಪ್ಪ ಬ್ಯಾಟೆಗೆ ಹೋಬಡಿತಾ ಹೇಳ್ರೂ ಕೇಳ್ದುಲೆ. ರಾಂಪನ ಅಪ್ಪ ಒಳಗಡೆಂದ ಬಂದ್. ನೋಡಿ ಮಕ್ಕಳೇ ಬ್ಯಾಟೆಗೆ ಹೋಕೆ ಏನ್ ಈಗಳೆ ಅವಸರ ಇಂದ್ ಹೋದು ಬ್ಯಾಡ ಇನ್ನೊಂದಿನ ಹೋಕ್ ನಾನೂ ಬನ್ನೆ ಆಗ ನಿಮ್ಮೊಟ್ಟಿಗೆ ಈಗ ಸುಮ್ಮನೆ ಮನೇಲಿ ಕುದ್ರಿ ತಾ ಹೇಳ್ದೊ.ರಾಂಪಂಗೆ ಸಿಟ್ಟ್ ಬಾತ್ . ನಾವು ಹೋದವೆ ನೀವು ಸುಮ್ಮನೆ ಹೊರ್ಡ್‌ಕನ ಅಡ್ಡಬಾಯಿ ಹಾಕಿ ಎಲ್ಲ ಹಾಳ್ ಮಾಡ್ದಡಿ ತಾ ಹೇಳಿ ಬೊಯ್ಕಂಡ್ ಅವ್ವಂಗೆ ಮಾಸ ಒಣ್‌ಗಿಸಿಕೆ ಬೆಸಗೆ ಕಟ್ಟಿಕ ತಾ ಹೇಳಿ ಹೊರ್ಟೇ ಬುಟ್ಟೊ. ಅವ್ವ ಏನೋ ಹೇಳಿಕೆ ತಾ ಬಂದವು ಮಂಜ ಬೇಜಾರ್ ಮಾಡಿಕಂಡದೆ ತಾ ಸುಮ್ಮನೆ ಆಗಿ ಒಳಗೆ ಹೋದೋ. ಹಂಗು ಹಿಂಗು ಇಬ್ಬರು ಬೆನ್ನಿಗೆ ಬೆಡಿ. ಚೀಲ ಹಾಕಂಡ್ ತಲೆಗೆ ಮುಂಡಾಸ್ ಕಟ್ಟಿ ಎಲೆ ಅಡ್ಕೆ ಹಾಕಿ ಸೂಟೆ ಹೊತ್ತಿಸ್ಕಂಡ್ ಹೊರ್ಟೊ. ಹೊರಡಿಕನ ಸುಮಾರ್ ಏಳ್ ಗಂಟೆ ಆಗಿರೋಕು ಕಂಡದೆ.



ಮಲೆಕಾಡಿಗೆ ನಾಲ್ಕ್ ಗಂಟೆ ಕಾಲ್ ದಾರಿಲಿ ನಡಿಯೋಕು. ಅವು ಮಲೆ ಕಾಡಿಗೆ ತಲ್ಪ್‌ಕನ ಸುಮಾರ್ ಹನ್ನೊಂದ್ ಗಂಟೆ ಆದು. ಇಬ್ಬರು ಮುಣು ಮುಣು ತಾ ಮಾತಾಡಿಕಂಡ್ ದಾರಿ ಸಾಗಿಸ್ತೊಳೋ. ಇವರ ಸೂಟೆ ಬೆಳ್ಕ್ ಬುಟ್ಟರೆ ಬೇರೆ ಯಾವ ಬೆಳ್ಕ್ ನೂ ಕಾಂಬಲೆ. ಗುಡ್ಡೆ ಹತ್ತಿ ಮಲೆಕಾಡ್‌ನ ದಾರಿ ಹಿಡ್ದೊ. ದೂರಂದ ಎಲ್ಲೋ ನಾಯಿ ಬೊಗುಳುವ ಸದ್ದ್ ಬುಟ್ರೆ ಅವು ಉಸುರಾಡ್ದ್ ಅವ್ಕೆ ಕೇಳಿಸ್ತಿತ್. ಕಾಡ್ ದಾರಿ ಹಿಡ್ದಂಗೆ ಜೋರಾಗಿ ಜಿರಿ ಜಿರಿಗ ಕಪ್ಪೆಗ ಗುಮ್ಮಗ

ಅಲ್ಲಿಂದ ಇಲ್ಲಿಂದ ಮರ್ದ್ನಾದು ಕೇಳಿಸ್ತಿತ್ತ್. ಇಬ್ಬರಿಗೂ ಮಾತ್ ಬ್ಯಾಡಗಿತ್ತ್ . ಬ್ಯಾಗ ಹೋಗಿ ತಲ್ಪಿರೆ ಸಾಕಗಿತ್ತ್. ಇಬ್ಬರು ಮಾತಾಡದೆ ನಡೀತಿದ್ರ್ವೋ . ಹೋಕಂಸ್ತ್ ಇರ್ಕನ ರಾಂಪನ ಕಾಲಿಗೆ ಎಂತದ್ರೋ ತಬ್ಬರಿಸಿದಂಗೆ ಆತ್. ಎಂತಾತ ಬಗ್ಗಿ ನೋಡ್ರೆ ಕಾಲಿಗೆ ಅದೆಂತದ್ರೋ ಒಂದು ಕಾಡ್ ಬಳ್ಳಿ ಸುತ್ತಿ ಹಾಕಂಡ್ತ್. ದೊಂದಿನ ಕೆಳಗೆ ಇಟ್ಟ್ ಕಾಲಿಗೆ ಸುತ್ತಿದ ಬಳ್ಳಿ ನ ಬುಡ್ಸೋಕೊರೆ ಜಾಮಿ ಹಿಂದೆ ತಿರ್ಗಿ ನೋಡದೆ ರಾಂಪನ ಬುಟ್ಟ್ ಎಷ್ಟೋ ಮುಂದೆ ಹೋಗಿ ಆಗಿತ್ತ್. ಇತ್ತ ಇದ್ದಕಿದ್ದಂಗೆ ರಾಂಪನ ದೊಂದಿ ಕೆಟ್ಟ್ ಹೋಗಿ ದಾರಿ ಕಾಣದಾಂಗೆ ಆತ್. ಹಿಂದೆಂದಾ ಒಂದೂ ಸದ್ದೂ ಕೂಡ ಕೇಳ್ತಿಲೆ ಅಲಾ ಈ ರಾಂಪಂಗೆ ಎಂಥ ಆತ್‌ತಾ ಜಾಮೀ ತಿರ್ಗಿ ನೋಡ್ರೆ ಹಿಂದೆ ರಾಂಪ ಇಲ್ಲೆ. ಇತ್ತ ರಾಂಪ ದಾರಿ ಕಾಣದೆ ಎತ್ತೆತ್ತಲ್ಲೋ ಹೋಗುತ್ತು. ಅವಂಗೆ ಆಗ ಅಪ್ಪ ಹೇಳ್ತಿದ್ದ ದಾರಿ ತಪ್ಪುಸುವ ತೊಡ್ರ್ ಬಳ್ಳಿ ನ ಗ್ಯಾನ ಆಗಿ ನಂಗು ಅದೇ ಆಗೋಳದ್ದ್. ರಾಂಪ ಜಾಮಿನ ಜೋರಾಗಿ ಕರ್ತ್ನ. ಆದ್ರೂ ಕೇಳ್ತಿಲ್ಲೆ. ಇಬ್ಬರು ಒಬ್ಬರನ್ನೊಬ್ಬರನ್ನ ಹುಡ್ಕಂಡ್ ಮಲೆ ಕಾಡ್ ತಲ್ಪಿದ್ರೋ. ಬ್ಯಾರೆ ಬ್ಯಾರೆ ದಿಕ್ಕ್‌ಲಿ ಇಬ್ಬರು ದೊಂದಿ ಬೆಳ್ಕ್ ಇಲ್ಲದೆ ಪರ್ದಾಡ್ತಿದ್ರೋ. ರಾಂಪ ಒಂದು ಮರದ ಕೆಳಗೆ ಕುದ್ದತ್. ಬ್ಯಾಗ್ ಒಳಗೆ ಕೈ ಹಾಕಿ ಬೆಂಕಿಪಟ್ನ ಕೆ ಹುಡ್ಕಿತ್. ಬೆಂಕಿಪಟ್ಟ ಹೊತ್ತ್ಸಿಕೆ ನೋಡ್ರೆ ಏನೇನ್ ಮಾಡ್ರೂ ಹೊತ್ತುಲೆ. ಸಿಟ್ಟ್ ಬಂದ್ ತೆಗ್ದ್ ಬಿಸಾಕಿತ್. ಮನೆಂದ ಹೊರಡಿಕನ ಇದ್ದ ಬ್ಯಾಟೆ ಗ್ಯಾನ ಈಗ ಇತ್ಲೆ. ರಾಂಪ ಒಮ್ಮೆ ಬಂದರೆ ಸಾಕ್‌ತಾ ಆಗಿ ಹೋಗಿತ್ ಅವಂಗೆ. ಕತ್ತಲೆ ಬೇರೆ ತಲೆ ಎತ್ತಿ ನೋಡ್ರೆ ಸುತ್ತಲೂ ಎಂಥನೂ ಕಾಂಬಲೆ. ಆಗ ಅವ ಕುದ್ದ್ ಕಂಡಿದ್ದ ಮರದ ಮ್ಯಾಲೆಂದ ಯಾರೋ ಸೀಟಿ ಹೊಡ್ದಂಗೆ ಕೇಳ್ತ್ ಜಾಮಿಗೆ. ಜಾಮಿ ರಾಂಪ ಬಾತ್ ಕಂಡದೆ ದಾರಿ ಗೊತ್ತಾಗದೆ ಅವನೇ ಸೀಟಿ ಹೊಡಿತೊಳದ್ ತಾ ಗ್ಯಾನ ಮಾಡಿ ಓಯ್ ನಾನ್ ಇಲ್ಲಿ ಒಳೆರಾ ಬಾತಾ ಜೋರಾಗಿ ಕರ್ತ್ನ. ಹಂಗೆ ಹೇಳ್ರೂ ಪುನ ಪುನ ಸೀಟಿ ಎರಡ್ ಸಲ ಕೇಳ್ತ್ ಆಮೇಲೆ ಸದ್ದೇ ಇಲ್ಲದಂಗೆ ಆತ್. ಸ್ವಲ್ಪ ಹೊತ್ತ್ ಹಂಗೆ ಕುದ್ದ್ ಕಂಡ್ ಇದ್ದವಂಗೆ ದೂರಂದ ದೊಂದಿ ಬೆಳ್ಕ್ ಕಂಡಂಗೆ ಆತ್. ಜಾಮಿಗೆ ಖುಷಿ ಆತ್. ಅಬ್ಬಾ ಹಂಗೂ ಹಿಂಗು ರಾಂಪ ಬಾತ್ ತಾ. ದೊಂದಿ ಬೆಳ್ಕ್ ಹತ್ರ ಹತ್ರ ಬಂದ್ ಅವನ ಕಾಲ್ ಬುಡದ ಹತ್ರ ಬಂದಂಗೆ ಆತ್. ನೋಡ್ರೆ ರಾಂಪನೇ ದೊಡ್ಡ ದೊಂದಿ ಹಿಡ್ಕಂಡ್ ಉಟ್ಟು. ಜಾಮಿ ರಾಂಪನ ಕೇಳ್ತ್ ನೀ ಎಲ್ಲಿ ಹೋದ್ ಮಾರಾಯ? ಹೌದು ಮನೆಂದ ಬಾಕನ ನಿನ್ನ ಕೈಲಿದ್ದದ್ ಸಣ್ಣ ದೊಂದಿ ಇದೆಲ್ಲಿಂದ ಇಷ್ಟ್ ದೊಡ್ಡ ದೊಂದಿ ಎಲ್ಲಿಂದ ಸಿಕ್ತ್ ನಿಂಗೆ ತಾ. ಆಗ ರಾಂಪ ಹೇಳ್ತ್ ನೀ ಸುಮ್ಮನಿರಪ ಬ್ಯಾಟೆ ಆಡಮೋ ಮಾತಾಡಿ ಕಾಲ ಕಳಿದು ಬ್ಯಾಡ. ಜಾಮಿಗೆ ರಾಂಪನ ವರ್ತನೆ ಯಾಕೋ ಸರಿ ಕಂಡತ್ಲೆ. ಹೆಂಗಾರ್ ಇರ್ಲಿ ತಾ ಇಬ್ಬರೂ ಮರದ ಕೆಳಗೆ ಕುದ್ದ್ ಬ್ಯಾಗ್‌ಲಿ ಇದ್ದ ಕಳ್ಳ್ ನ ಕುಡ್ದ್ ಬ್ಯಾಟೆಗೆ ಹೊಟ್ರೋ. ಪಾಪ ಜಾಮಿಗೆ ಗೊತ್ತೆ ಅವನ ಹಕ್ಕಲೆ ಬಂದವ ರಾಂಪ ಅಲ್ಲ ರಾಂಪನ ವೇಷ ಹಾಕಿದ ಕಾಡ್ ಜೀರ ತಾ. ಕಾಡ್‌ಲಿ ಗದ್ದೆ ಜೊಯ್ದ್‌ಗಳಲ್ಲಿ ಜೀರ ದೊಂದಿ ಸೂಟೆ ಹಿಡ್ಕಂಡ್ ನಡುರಾತ್ರಿಲಿ ನಡ್ಕಂಡ್ ಹೋದೆ ತಾ ಮತ್ತೆ ಜೀರಂಗೆ ಮನುಷ್ಯನಂಗೆ ವೇಷ ಬದ್ಲಾಯ್ಸಿಕೆ ಬಂದದೆಗಡ ಮತ್ತೆ ಜಗಳ ಮಾಡಿ ಪ್ರಾಣ ಕೂಡ ತೆಗ್ದದೆ ಗಡತ ಹಿರಿಯವ್ರು ಹೇಳುವೆ.

ಪಾಪ ಇಲ್ಲಿ ಜಾಮಿ ಇದ್ದಾವ್ರರ ಗೋಜು ಇಲ್ಲದೆ ಬ್ಯಾಟೆಗೆ ಜೀರ ನೊಟ್ಟಿಗೆ ಹೋಗ್ತುಟ್ಟು. ಇತ್ತಕಡೆ ದಾರಿ ತಪ್ಪಿದ ರಾಂಪ ಒದ್ದಾಡಿಕಂಡ್ ಜಾಮಿನ ಕರ್ದ್ ಕರ್ದ್ ಸುಸ್ತಾಗಿ ಮರದ ಕೆಳಗೆ ಕುದ್ದ್ ಅವನೂ ತಂದ ಕಳ್ನ ಕಾಲಿ ಮಾಡ್ತ್. ಅಷ್ಟೊತ್ತಿಗೆ ಅವಂಗೆ ಕೂಡ ಯಾರೋ ಎರಡ್ ಸೀಟಿ ಹೊಡ್ದಂಗೆ ಕೇಳ್ತ್. ರಾಂಪ ಗ್ಯಾನ ಮಾಡ್ತ್ ಇದ್ ಜಾಮಿನೇ ನನ್ನ ಹುಡ್ಕಿ ಹುಡ್ಕಿ ಮರ ಹತ್ತಿ ಈಗ ಸೀಟಿ ಹೊಡಿತೊಳದ್ ತಾ. ಇಲ್ಲಿ ಇಬ್ಬರಿಗೂ ಸೀಟಿ ಹೊಡ್ದ್ ಅಪಾಯದ ಮುನ್ಸೂಚನೆ ಕೊಟ್ಟದ್ ತಮ್ಮಟ್ಟ. ಈ ಕಾಡ್‌ಲಿ ಜೀರ ಮತ್ತೆ ಜೇರೆ ಕೆಟ್ಟ ಶಕ್ತಿಗ ಮಾಡುವ ಅಪಾಯಗಳನ್ನ ತಮ್ಮಟ್ಟ ತೇಳುವ ಕಾಣದ ಶಕ್ತಿ ಸೀಟಿ ಹೊಡ್ದ್ ಎಚ್ಚರಿಕೆ ಕೊಟ್ಟದೆ ತಾ ಅಪ್ಪ ತಾತಂದಿರ್ ಕಥೆ ಹೇಳ್ವಾನಾ ಹೇಳ್ದ್ ನೆನಪು. ಆದರೆ ಇಲ್ಲಿ ಇಬ್ಬರಿಗೂ ಅದ್ ಗೊತ್ತ್ ಆತ್ಲೇ. ರಾಂಪನ ವೇಷಲಿರುವ ಜೀರ ಜಡಿ ಹಿಡ್ಕಂಡ್ ಜಾಮಿ ನ ಕರ್ಕಂಡ್ ಬಂದ್ ರಾಂಪ ಕುದ್ದಲ್ಲಿಗೆ ನೋಡಿ ಗುರಿ ಇಟ್ಟತ್. ಜೀರ ಜಾಮಿಗೆ ಹೇಳ್ತ್ ನೀನ್ ಕೂಡ ನಾ ಗುರಿ ಇಟ್ಟಲ್ಲಿಗೆ ಇಡ್. ಅಲ್ಲಿ ಒಂದು ಬ್ಯಾಟೆ ಕುದ್ದಂಗೆ ಉಟ್ಟು ತಾ. ಇಬ್ಬರೂ ನೋಡಿ ರಾಂಪ ಕುದ್ದಲ್ಲಿಗೆ ಗುಂಡು ಹೊಡ್ದೋ . ಗುಂಡು ಹೋಗಿ ಸರಿಯಾಗಿ ರಾಂಪನ ಎದೆಗೆ ಬಿತ್ತ್. ರಾಂಪನ ಪ್ರಾಣ ಪಕ್ಷಿ ಕುದ್ದ ಮರದ ಕೆಳಗೆನೇ ಹಾರಿ ಹೋಗಿತ್. ಜಾಮಿ ಹೇಳ್ತ್ ಬಾ ನೋಡಮ ಬ್ಯಾಟೆ ಬಿದ್ದುಟಾತ. ಆಗ ಗುಂಡು ಹೊಡ್ದ ಜೀರ ಹೇಳ್ತ್ ಗುಂಡು ಮರಕ್ಕೆ ಬೀತ್ ಬ್ಯಾಟೆ ತಪ್ಪಿಸಿಕಂಡತ್ ಬಾ ಸ್ವಲ್ಪ ಹೊತ್ತ್ ಬುಟ್ಟ್ ಬರಮೋ ತಾ ಹೇಳಿ ಜಾಮಿ ನ ಅಲ್ಲಿಂದ ಕರ್ಕಂಡ್ ಆಕಡೆ ಹೋತ್. ಅದ್ಯಾಕೋ ಜಾಮಿಗೆ ರಾಂಪನ ನಡವಳಿಕೆ ವರ್ತನೆ ಲಿ ತೀರಾ ಬದಲಾದಂಗೆ ಕಂಡತ್. ಪಾಪ ಜಾಮಿ ಗೇನ್ ಗೊತ್ತುಟ್ಟು ಅವನೊಟ್ಟಿಗೆ ಇರವ ರಾಂಪ ಅಲ್ಲ ಅವನ ವೇಷಲಿ ಇರುವ ಜೀರ ತಾ. ಜಾಮಿಗೆ ಜೀರ ಹೇಳ್ತ್ ಇನ್ನು ಸ್ವಲ್ಪ ಹೊತ್ತ್ ಇಲ್ಲಿ ಮರದ ಕೆಳಗೆ ಮಲಗಿ ಸರೀ ಮಧ್ಯರಾತ್ರಿ ಎರಡ್ ಗಂಟೆಗೆ ಎದ್ದ್ ಬ್ಯಾಟೆ ಶುರು ಮಾಡಮ ಆಗ ಪ್ರಾಣಿಗೆಲ್ಲ ಪೊದೆ ಒಳಗೆ ಮಲಗಿದ್ದವೆ ಗುಂಡು ಹೊಡ್ಯಕೆ ಸುಲ್ಭ ತಾ . ಹಂಗೆ ಇಬ್ಬರು ಎಲೆ ಅಡ್ಕೆ ಬ್ಯಾಗ್ಂ ದ ತೆಗ್ದ್ ತಿಂದ್ ಮಲ್ಗಿದೋ. ಜಾಮಿಗೆ ಅನುಮಾನ ಬಾತ್ ಯಾಕೆತೇಳ್ರೇ ರಾಂಪ ಎಲೆ ಅಡ್ಕೆ ಗೆ ಯಾಗೋಳು ಹೊಸೆಪ್ಪು ಹಾಕ್ತಇತ್ಲೆ. ಇಂದ್ ಹೊಸೆಪ್ಪು ಹಾಕಿದ್ ನೋಡಿ ಜಾಮಿಗೆ ಅನುಮಾನ ಜಾಸ್ತಿ ಆತ್. ಇಬ್ಬರು ಒಟ್ಟಿಗೆ ಮಲ್ಗಿದೋ. ಜಾಮಿಗೆ ಕಣ್ಣಿಗೆ ನಿದ್ದೆ ಹತ್ತಿತ್ಲೇ ಇತ್ತ ಒಟ್ಟಿಗೆ ಮಲ್ಗಿದ ಜೀರ ತಲೆಗೆ ಕೈ ಕೊಟ್ಟ್ ಎದ್ದ್ ಆಗಾಗ ಜಾಮಿನ ನೋಡ್ತಿತ್. ಅಷ್ಟೊತ್ತಿಗೆ ಸರಿಯಾಗಿ ಪುನಃ ತಮ್ಮಟ್ಟ ಮರದ ಮೇಲೆಂದ ಎರಡ್ ಸೀಟಿ ಹೊಡ್ತ್. ಜೀರ ಆಗ ಬಾಯಿಲಿದ್ದ ಎಲೆ ಅಡಕೆನ ತೂ ತಾ ಮೇಲಕ್ಕೆ ಉಗ್ದ್ ಸುಟ್ಟ ಪಾಪುರು ಯಾಗೋಳು ರಾತ್ರಿ ಬಂದ್ ಸೀಟಿ ಹೊಡಿದು ಕೆಲ್ಸ ಇಲ್ಲದೆ ತಾ ಬೊಯ್ಕಂಡ್ ಪುನಃ ಮಲ್ಗಿತ್. ಮಲ್ಕಂಡ್ ಇದ್ದ ಜಾಮಿಗೆ ಅಪ್ಪ ಹೇಳ್ತಿದ್ದ ತಮ್ಮಟ್ಟ ಜೀರ ನ ಕಥೆಗ ನೆನಪಾಗಿ ತಲೆಗೆ ಬಂದ್ ಹೋತ್. ಮೇಲೆಂದ ಸೀಟಿ ಹೊಡ್ದದ್ ನೋಡಿ ಇವಂಗೆ ಪಕ್ಕಾ ಆತ್. ನನ್ನೊಟ್ಟಿಗೆ ಒಳದ್ ರಾಂಪ ಅಲ್ಲ ಜೇರೆ ಯಾರೋ ಅದ್ಕೆ ತಮ್ಮಟ್ಟ ಬಂದ್ ನನ್ನನ್ನ ಎಚ್ಚರಿಸ್ತಾ ಒಳದ್ ತಾ. ಇಲ್ಲಿಂದ ಹೆಂಗಾರ್ ಮಾಡಿ ತಪ್ಪಿಸಿಕಂಡ್ ಹೋಗಿ ರಾಂಪನ ಹುಡ್ಕಿ ಮನೆಗೆ ಕರ್ಕಂಡ್ ಹೋದರೆ ಸಾಕಪ್ಪ ತಾ ಜಾಮಿ ಮನ್ಸ್

ನ ಒಳಗೆ ಗ್ಯಾನ ಮಾಡಿಕಂಡ್ ನಿದ್ದೆ ಬಂದವರಂಗೆ ನಾಟಕ ಮಾಡಿಕಂಡ್ ಮಲ್ಗಿತ್. ಚಾಮಿನ ಎದೆಯೊಳ್ಗೆ ಅವಲಕ್ಕಿ ಕುಟ್ಟಿದಾಂಗೆ ಆಗತಿತ್ತ್. ಇತ್ತ ಚಾಮಿ ಕಣ್ಣು ಮುಚ್ಚಿದ್ ನೋಡಿ ಜೀರ ಮೆಲ್ಲ ಎದ್ದ್ ಬಾಯಿಗೆ ಬಂದಂಗೆ ಬೊಯ್ಕಂಡ್ ದೊಡ್ಡ ದೊಡ್ಡ ಮರ ಪೀಸ್‌ಗಳನ್ನ ಚೆರಂಬುಗಳನ್ನ ಹುಲ್ಲುಗಳನ್ನ ತಂದ್ ತಂದ್ ಚಾಮಿನ ಹತ್ರ ರಾಶಿ ಹಾಕ್ತ ಇತ್ತ್. ಹುಲ್ಲುನ ರಾಶಿ ದೊಡ್ಡದಾತ್ . ಚಾಮಿ ಮೆಲ್ಲ ಕಣ್ಣು ಬುಟ್ಟ್ ನೋಡ್ತ್ . ಅವಂಗೆ ಹೆದ್ರಿಕೆ ಆತ್ ನಾನ್ ಇಲ್ಲೇ ಮಲ್ಕಂಡ್ ಇದ್ದರೆ ನನ್ನ ಸುಟ್ಟು ಹಾಕಿದೆ ಇಲ್ಲಿಂದ ಮೆಲ್ಲ ತಪ್ಪಿಸಿಕಣಕು ತಾ ಗ್ಯಾನ ಮಾಡಿ ಮೆಲ್ಲ ಎದ್ದು ಕೋವಿ ಹಿಡ್ಕಂಡ್ ಅಲ್ಲೇ ಇದ್ದ ಮರಕ್ಕೆ ಮೆಲ್ಲ ಹತ್ತಿ ಮರದ ಮ್ಯಾಲೆ ಒಂದು ಕೊಂಬೆಲಿ ಕುದ್ದ್ ನೋಡ್ತ್. ಇವ ಏನ್ ಮಾಡ್ದೆ ನೋಡನೋ ತಾ ಕುದ್ದತ್. ಇತ್ತ ಜೀರ ದೊಡ್ಡ ಹುಲ್ಲ್‌ನ ರಾಶಿ ನೋಡಿ ಜೋರಾಗಿ ನಗಾಡಿಕಂಡ್ ಮಲ್ಗೋ ಶ್ರೀ .ಲಾಯ್ಕ್ ಮಲ್ಗ್ ಇನ್ನು ಸ್ವಲ್ಪ ಹೊತ್ತ್ ಲಿ ನಿನ್ನ ಬೆಂಕಿ ಲಿ ನಾನ್ ಚಳಿ ಕಾಸಿನೇ ತಾ ಹೇಳಿಕಂಡ್ ಬಂದ್ ಅಲ್ಲಿದ್ದ ರಾಶಿಗೆ ಒಂದು ಸೂಟೆ ತಕಂಡ್ ಬಂದ್ ಬೆಂಕಿ ಕೊಟ್ಟೇಬುಡ್ತ್ . ಜೀರನ ಗ್ಯಾನ ಚಾಮಿ ಅದರ ಒಳಗೆ ಮಲ್ಗಿಟ್ಟು ತಾ. ಇತ್ತ ಮರದ ಮ್ಯಾಲೆ ಕುದ್ದ ಚಾಮಿಗೆ ಇದನ್ನ ನೋಡಿ ಕೈ ಕಾಲ್ ದರ್ಪಿ ಹೋತ್. ಬೆಂಕಿ ಸುತ್ತ ಜೀರ ಬಾಯಿಗೆ ಬಂದಂಗೆ ಹಾಡ್ ಹೇಳಿಕಂಡ್ ಸುತ್ತು ಸೂಟೆ ಹಿಡ್ಕಂಡ್ ಕುಣಿತಿತ್ತ್. ಚಾಮಿ ಧೈರ್ಯ ಮಾಡಿ ಜೀರಂಗೆ ಗುರಿ ನೋಡಿ ಮರದ ಮ್ಯಾಲೆಂದನೆ ಗುಂಡು ಹೊಡ್ತ್. ಗುಂಡು ಸರಿಯಾಗಿ ಹೋಗಿ ಜೀರನ ತಲೆಗೆ ತಾಗಿತ್. ಅಷ್ಟೇ ಸ್ವಲ್ಪ ಹೊತ್ತಿಗೆ ಅಲ್ಲಿದ್ದ ಬೆಂಕಿ ಕೆಟ್ಟ್ ಹೋತ್ .ಸುತ್ತ ಕತ್ತಲೆ ಆತ್. ಎಲ್ಲಾ ಕಡೆ ಸೂಜಿ ಬಿದ್ದರೂ ಕೇಳುವಷ್ಟ್ ನಿಶ್ಯಬ್ದ. ಚಾಮಿಗೆ ಮರಂದ ಕೆಳಗೆ ಇಳ್ದ್ ನೋಡುವಷ್ಟ್ ಧೈರ್ಯ ಬಾತ್ಲೇ. ಮರದ ಮೇಲೇನೆ ಕಣ್ಣು ಮುಚ್ಚಿ ಕಾಡ್ ಚೌಂಡಿನ ಪಾಷಣ ಮೂರ್ತಿನ ಗ್ಯಾನ ಮಾಡಿಕಂಡ್ ಈ ಸಲ ಎರಡ್ ಕೋಳಿ ಕೊಯ್ತಿನೆ ಕಾಪಾಡ್ ತಾ ಹೇಳಿಕಂಡ್ ಬೆಳಗಾಗುವರೆಗೆ ಅಲ್ಲೇ ಕುದ್ದ್ ಕಾಲಕಳ್ತ್. ಬೆಳಗ್ಗೆ ಆದಂಗೆ ಮರಂದ ಇಳ್ದ ಚಾಮಿ ಜೀರ ಬಿದ್ದ ಜಾಗನ ನೋಡ್ತ್. ಅಲ್ಲಿ ನೋಡ್ರೆ ರಾತ್ರಿ ಬೆಂಕಿ ಹಾಕಿದ ಗುರ್ತು ಇತ್ಲೇ. ಜೀರನು ಇತ್ಲೇ. ಜೀರ ಬಿದ್ದ ಜಾಗಲಿ ಒಂಥರಾ ಹಸ್ರ್ ಬಣ್ಣದ ಹಾವಸೆ ನಂಗೆ ಇಷ್ಟಗಲಲಿ ಬಿದ್ದಿತ್. ಚಾಮಿ ಅದನ್ನ ನೋಡಿ ಅಲ್ಲಿಂದ ಓಟಕಿತ್ತತ್ .ರಾಂಪ ರಾಂಪ ತಾ ಕರ್ಕಂಡ್ ಕಾಡ್ ಪೂರಾ ಓಡ್ತಿತ್ತ್. ಇತ್ತ ರಾಂಪ ಹೆಣ ಆಗಿ ಬಿದ್ದಿತ್. ಓಡಿ ಓಡಿ ಹಂಗೂ ಹಿಂಗೂ ಮನೆ ಸೇರ್ದ ಚಾಮಿ. ರಾಂಪನ ಕಾಣದೆ ಜ್ವರ ಬಂದ್ ಮಲ್ಗಿದವ ಮ್ಯಾಲೆ ಎದ್ದತೇಲೆ. ಈಗಲೂ ಕಾಡ್‌ಲಿ ಗದ್ದೆ ಬೊಯ್ಲ್ ಗಳಲ್ಲಿ ಜೀರ ಮಧ್ಯರಾತ್ರಿ ಸೂಟೆ ಹಿಡ್ಕಂಡ್ ಹೋದೆ. ಅದ್ರ ಎದ್ರ್ ಯಾರದ್ರ್ ಹೋದರೆ ಹೊಡ್ದ್ ಹಾಕಿದೆ ತಾ ಹಿರಿಯವ್ರು ಹೇಳುವೆ. ಎಲ್ಲಿ ಕೆಟ್ಟದರೊಟ್ಟಿಗೆ ಒಳ್ಳೇದ್ ಒಂದು ಇದ್ದದೆ ತಾ ಹೇಳುವಂಗೆ ಈ ಜೀರ ಮಾಡುವ ಅನಾಚಾರಗಳನ್ನು ತಮ್ಮಚ್ಚ ಸೀಟೆ ಹೊಡ್ದ್ ಎಚ್ಚರ್ಸಿದೆ ಗಡ. ಅದೇನ್ ಹೇಳ್ರೂ ದೆವ್ವ ದೇವರಗಳ ಮುಂದೆ ಮನುಷ್ಯನ ಆಟ ಏನೂ ನಡೆಯಲೆ.

ರಶ್ಮಿ ಎನ್. ಟಿ. ಅಮೆ ಮನೆ
ತಾವೂರು ಗ್ರಾಮ, ಭಾಗಮಂಡಲ, ಮೊ. : 9482979405



# ಮಾಟ

ನಮ್ಮ ಕೊಡಗಲಿ ಹಿಂದೆಲ್ಲಾ ಬೇಕಾದಂಗೆ ಭತ್ತದ ಕೃಷಿ ನಡೀತಿತ್ತ್. ಎಲ್ಲಿ ನೊಡ್ರೆ ಅಲ್ಲಿ ಭತ್ತದ ಗದ್ದೆಗ. ರೈತ ಅಂದ್ರೆ ಭತ್ತ ವ್ಯವಸಾಯ ಮಾಡುವ ಎಂದೇ ಅರ್ಥ ಇತ್ತ್. ಆದ್ರೆ ಇತ್ತೀಚಿನ ವರ್ಷಗಳ್ಲಿ ಜನ ಶೋಕಿ ಮತ್ತೆ ದುಡ್ಡಿನ ಆಸೆಗೆ ಬಿದ್ದ್ ಭತ್ತದ ಗದ್ದೆಗಳ್ನೆಲ್ಲಾ ಕಾಫಿ ತೋಟಾಗಿ, ಸೈಟ್‌ಗಳಾಗಿ ಮಾಡ್ತಾ ವುಳೊ.

ನಮ್ಮ ಅಪ್ಪ ತೀರಿಕೆ ಒಂದ್ ವಾರ ಮೊದ್ಲು ನನ್ನ ಕೈ ಹಿಡ್ದ್ 'ನೋಡು ಮಂಜ ಗದ್ದೆ ನಾಟಿ ಮಾಡ್ವ ಕಾರ್ಬಾರ್‌ನ ಬಿಡ್‌ಬಡ. ನಾನ್ ನನ್ನ ರಕ್ತ ಬಸ್ತ್ ಇದ್ನೆಲ್ಲಾ ಮಾಡ್ದೆ. ಕಾಡ್, ಗುಡ್ಡೆ, ಬರೆ ಎಲ್ಲಾ ಕೈಯ್ಯಾರ ಅಗ್ದು ಗದ್ದೆ ಮಾಡ್ದೆ, ಇದು ನಮಿಗೆ ಅನ್ನ ಕೊಡ್ವ ದೇವ್ರು' ಅಂತೇಳಿ ನನ್ನ ಕೈಲಿ ಬಾಸೆ ತಕ್ಕಂಡೊ. ನಾನುಸ ಅಪ್ಪನ ಮಾತ್‌ನ ಪರಿಪಾಲನೆ ಮಾಡಕು ಅಂತೇಳಿ ನಾಲ್ಕೈದ್ ವರ್ಷ ಖರ್ಚು ಹೆಚ್ಚಾದ್ರು ಗದ್ದೆ ವ್ಯವಸಾಯ ಮಾಡ್ದೆ. ಆದ್ರೆ ವರ್ಸ ಕಳ್ದಂಗೆ ಕೂಲಿ, ಗೊಬ್ಬರ ಖರ್ಚು ಹೆಚ್ಚಾಗಿ ಸಾಲ ಮಾಡ್ವ ಪ್ರಸಂಗ ಬಾತ್.

ಬರ್ವ ವರ್ಷಂದ ಗದ್ದೆ ವ್ಯವಸಾಯ ಮಾಡಕಿಲ್ಲೆ ಅಂತ ನನ್ನ ಹೆಣ್ಣ್ ಜತೆ ಹೇಳ್ದೆ. ಒಂದು ವಾರಕ್ಕೆ ಖಾಲಿ ಇದ್ದ ತೋಟದ ಲೈನ್‌ಮನೆಗೆ ಒಬ್ಬ ಆಫೀಸರ್‌ನಂಗೆ ವೇಸ ಭೂಷಣ ಮಾಡ್ದ ವ್ಯಕ್ತಿ ಬಾತ್. ನೋಡಿಕೆ ಮಿಲಿಟ್ರಿಯವನಂಗೆ ಕಾಣ್ತಿತ್ತ್. ಹುರಿ ಮೀಸೆ. ಆದ್ರೆ ಕುಳ್ಳ ಆಸಾಮಿ. ಲಾರಿ ತುಂಬಾ ಇದ್ದ ಸಾಮಾನು ಲೈನ್ ಮನೇಲಿ ಇಳ್ಸಿ ಹೋತ್. ಅವ್ನ ಹೆಸ್ರು ಪರಿವಾರದ ಬೈರಪ್ಪ ನಾಯಕ ಅಂತ. ಮೊದ್ಲಿಗೆ ಅವ್ನ ಹೆಸ್ರೇ ವಿಚಿತ್ರ ಆಗುಟ್ಟು ಅಲ್ಲಾ ಅಂತ ಎಲ್ರಿಗೂ ಆಶ್ಚರ್ಯ ಆತ್. ಎರಡೇ ದಿನಕ್ಕೆ ಅವ್ನ ದೊಡ್ಡ ಸಂಸಾರ ನಮ್ಮ ಲೈನ್ ಮನೆಗೆ ಬಾತ್. ಅವ್ನ ಹೆಣ್ಣ್ ಸುಶೀಲ, ಮಗ್ಳು ಗೌರಿ, ಅಷ್ಟಿಗೆ ನಾಲ್ಕೈದ್ ಮಕ್ಕ ಹಿಂಗೆ ದೊಡ್ಡ ಪರಿವಾರ ಬಂದಿಳಿಕನ ಇದ್ನ ನೋಡಿಯೇ ಯಾರೋ ಅವ್ನ್‌ಗೆ ಪರಿವಾರದ ಬೈರಪ್ಪ ನಾಯಕ ಅಂತ ಹೆಸ್ರು ಇಟ್ಟಿರಕೂ ಅಂತ ನಾನ್ ಬಾವಿಸ್ದೆ. ಏನಾದ್ರೂ ಆಗ್ಲಿ ಪಾಳ್ ಬೀಳ್ತಿದ್ದ ಗದ್ದೆ ಮಾಡಿಕೆ ಒಬ್ಬ ಜನ ಸಿಕ್ತಲ್ಲ ಅಂತ ಕುಸಿ ಆತ್.

ಈ ಬೈರಪ್ಪ ಮತ್ತೆ ಹೆಣ್ಣ್ ಸುಶೀಲ ಇಬ್ರೂ ನಮ್ಮ ತೋಟದ ಮನಿಗೆ ಗದ್ದೆ ವಾರ ಮಾಡ್ವ ಉದ್ದೇಶಂದ ಬಂದ್ ಇಬ್ರೂ ಸೋಮಾರಿಗ ಆಗಿದೊ. ಮೈ ಮುರ್ದು ಕೆಲ್ಸ ಮಾಡಿಕೆ ಅವುಕೆ ಆತ್ಲೆ. ಅಲ್ಲಿ ಇಲ್ಲಿ ಸುಳ್ಳು ಹೇಳ್ತಾ ಯಾರತ್ತಾನಾದ್ರೂ ದುಡ್ಡು ಇಸಿಕಂಡು ಕಾಲ ಕಳಿಯೋ ಮನ್‌ಸ್ರು ಅಂತ ನಂಗೆ ಬೇಗ ಗೊತ್ತಾತ್. ಬೈರಪ್ಪನ ಹೆಣ್ಣ್ ಸುಶೀಲ ಅಂತೂ ಮಹಾ ಮಾಂಸ ಭಕ್ಷಕಿಯಾಗಿದ್ದ್ ದಿನಾ ಆಡು, ಕುರಿ, ಹಂದಿ ಇವ್ಯಾವ್ದೂ ಸಿಕ್ಕಿತ್ಲೆ ಅಂತೇಳ್ರೆ ಕಡೇ ಪಕ್ಷ ಸುಲಭಲಿ ಸಿಕ್ಕೊ ಕೋಳಿ ಮಾಸ ಇಲ್ದೆ ಅದರ ಊಟ ಪೂರ್ತಿ ಆದುಲೆ. ಹಿಂಗಾಗಿ ಬೈರಪ್ಪ ದುಡ್ದ ದುಡ್ಡೆಲ್ಲಾ ಅವ್ನ ಹೆಣ್ಣ್‌ನ ಬಾಯಿ ಚಪ್ಪಕೆ

ಆಕ್ತಿತ್. ಇಸ್ಟ್ ಸಾಲ್ಟ್ ಅಂತ ಅವ್ನ ಮಗ್ಳು ಗೌರಿ ತಾನೇನು ಕಮ್ಮಿ ಇಲ್ಲೆ ಅಂತ ತಾಯಿ ಮಾಸ ಭಕ್ಷಕಿಯಾದ್ರೆ ಗೌರಿಗೆ ಮಾಸದ ಜೊತೆಗೆ ವಿಪರೀತ ಕಳ್ಳು ಕುಡಿಯುವ ಅಭ್ಯಾಸ ಇತ್ತ್. ಬೈರಪ್ಪ ತನ್ನ ಪ್ಯಾಂಟ್, ಚಡ್ಡಿ ಜೇಬ್‌ಲಿ ಇಸ್‌ತಿದ್ದ ದುಡ್ಡ್‌ನೆಲ್ಲಾ ಕದ್ದ್ ಕಳ್ಳಿಗೆ ಹಾಕ್ತಿತ್ ಗೌರಿ. ದಿನ ಕಳ್‌ದಂಗೆ ಊರಿನ ಜನ್ರೆಲ್ಲಾ ಗೌರಿನ ಕಳ್ಳಭಟ್ಟಿ ಗೌರಿ ಅಂತ ಕರೀಕೆ ಸುರು ಮಾಡ್ದೊ.

ಪರಿವಾರದ ಬೈರಪ್ಪ ನಾಯ್ಕ ಅಂತ ದೊಡ್ಡ ಹೆಸ್ರಿದ್ರೂ ಮನೆತುಂಬಾ ಬಡ್ತನ ಇತ್ತ್. ಒಬ್ಬ ದುಡ್ದ್ ಹತ್ತ್ ಜನ ಕುದ್ದು ತಿಂದ್ರೆ ಇನ್ನೇನ್. ಈ ಗೌರಿಗೆ ಬಡತನಕ್ಕೆ ಮಕ್ಕ ಜಾಸ್ತಿ ಅನ್ನಂಗೆ ಜಾರುಬಂಡೆ ಆಡಿ ಆಡಿ ಕುಂಡೆಯ ಬಳಿ ಚಡ್ಡಿ ಪೂರಾ ಹರ್ದ್ ಹೋದ ಇಬ್ರು ಗಂಡ್ ಮಕ್ಕ, ಎಣ್ಣೆ ಕಾಣದ ಮಾಸಲು ಜಡೆಯ ಮೂರು ಗೂಡೆಗಳೂ ಇದ್ದೊ. ಅವ್ಕೆಲ್ಲಾ ಕೂಳು ಹಾಕಿ ಸಾಕಿಕೆ ಬೈರಪ್ಪನಾಯಕ ತಾನ್ ಕಲ್ತ ಬುದ್ಧಿನೆಲ್ಲಾ ಖರ್ಚ್ ಮಾಡಕಾಗಿತ್ತ್. ಗೌರಿನ ವಿಪರೀತ ಹೆಂಡ ಕುಡ್ತ ನೋಡಿ ಬೇಸತ್ತ ಅವ್ಳ ಗಂಡ ಒಂದಿನ ಮನೆಬಿಟ್ಟು ಶಾಶ್ವತವಾಗಿ ದೇಸಾಂತರ ಹೋತ್. ಇದಕ್ಕೇನೂ ತಲೆ ಕಡಿಸ್‌ಕೊಳ್ಳದ ಗೌರಿ ಮಕ್ಕನ್ನ ಸಾಕುವ ಜವಾಬ್ದಾರಿನೆಲ್ಲಾ ಅಪ್ಪ ಅಮ್ಮನ ಮೇಲೆ ಹೊರ್ಸಿ ಊರಿನ ಪಡ್ಡೆ ಹುಡುಗ್ರ ಶೀಲ ಕೆಡಿಸ್ತಾ ಕಾಲ ಕಳೆಯತೊಡಗಿತ್ತ್. ಈ ಪರಿವಾರದ ಬೈರಪ್ಪನಾಯಕನ ಒಂದು ವಿಶೇಷ ಗುಣ ಅಂದ್ರೆ ಅವ ವಿಪರೀತ ಸುಳ್ಳು ಬುರುಕ ಆಗಿತ್ತ್. ಸತ್ಯದ ತಲೆ ಮೇಲೆ ಹೊಡ್ದಂಗೆ ಸುಳ್ಳು ಹೇಳ್ವ ಕಲೆ ಅವಾಂಗೆ ಇತ್ತ್.

ಬೈರಪ್ಪನ ಸುಳ್ಳಿನ ಸರಮಾಲೆಗ ನೂರಾರು ಇದ್ರೂ ಇಲ್ಲಿ ರಸ ಇರುವ ಕೆಲವನ್ನ ಮಾತ್ರ ಹೇಳ್ನೆ. ಒಮ್ಮೆ ಬೈರಪ್ಪ ಮೈಸೂರಿನಿಂದ ಕುಶಾಲನಗರಕ್ಕೆ ಕೆ.ಎಸ್.ಆರ್.ಟಿ.ಸಿ. ಬಸ್ಸ್‌ನಲ್ಲಿ ಬಾತ್. ಬಿಳಿಕೆರೆಗೆ ಬಸ್ ಚಾಕಾಕನ ಹತೋಟಿ ತಪ್ಪಿ ಕೆರೆಗೆ ಬೀತ್. ಡ್ರೈವರ್ ಹೆದ್ರಿ ಬಸ್‌ನ ಅಲ್ಲೆ ಬುಟ್ಟು ನೆಗ್ದು ಪರಾರಿ ಆತ್. ಆಗ ಈ ಬೈರಪ್ಪ ತಾನೇ ಬಸ್‌ನ ಮೇಲಕ್ಕೆ ತಂತದ್. ಈ ಪ್ರಸಂಗ ಹಸಿ ಸುಳ್ಳು ಅಂತ ನಮಿಗೆ ಗೊತ್ತಾತ್. ಯಾಕಂದ್ರೆ 4½ ಅಡಿ ಎತ್ರ ಇರೋ ಇವ ಬಸ್‌ನ ಮೇಲೆ ತಂದದ್ದು ಸುಳ್ಳು ಅಲ್ದೆ ಮತ್ತೆ ಎಂತದ್ದ್.

ಮತ್ತೊಂದ್ ಸಲ ಈ ಬೈರಪ್ಪ ನಾವೆಲ್ಲಾ ಮನೆ ಜಗಲಿ ಮೇಲೆ ಕುದ್ದ್‌ಕಂಡ್ ಲೋಕಾರಾಮ ಮಾತಾಡ್ತ ಇದ್ದೊ. ಆ ಹರಟೆ ಜಗಲೀಲಿ ನನ್ನ ಹೆಣ್ಣ್, ಇಬ್ರು ಮಕ್ಕ ಸಹ ಇದ್ದೊ. ಬೈರಪ್ಪ ಹೀಂಗೆ ಹೇಳ್ತಾ ನಾನ್ ಒಳ್ಳೆ ಬೇಟೆಗಾರ, ನಾನ್ ಕೋವಿ ಹಿಡ್ದು ಗುಂಡ್ ಹಾರ್ಸಿದ್ರೆ ಗುರಿ ತಪ್ಪುದೇ ಇಲ್ಲೆ, ಒಂದ್ಸಲ ಒಂದು ಹುಲಿ ನನ್ನ ಮೇಲೆ ಓಂದೆಂದ ದಾಳಿ ಮಾಡ್ತ್. ಆಗ ನಾನ್ ಬದ್ಕಿ ಉಳ್ದದ್ದೇ ಹೆಚ್ಚ್ ಅಂತ ಹೇಳ್ತ್. ಇದಂತೂ ಖಂಡಿತಾ ಮಹಾಸುಳ್ಳ್ ಅಂತ ನಮಿಗೆ ಮನವರಿಕೆ ಆತ್. ಹಾಂಗೆ ನಾವ್ ಹೌಟು ಪಡೋದ್ನ ನೋಡ್ದ ಬೈರಪ್ಪ ಅಲ್ಲಿ ಹೆಂಗುಸ್ರು ಮಕ್ಳು ಒಳಂತೇಳ್ವ ಸ್ವಯಾನೇ ಇಲ್ದೆ ಪ್ಯಾಂಟ್ ಬಿಚ್ಚಿ ಅವ್ನ ಬಲ ತೊಡೇಲಿ ಸುಮಾರು 1 ಅಡಿ ಉದ್ದದ ಆಳವಾದ ಗಾಯನ ತೋರ್ಸಿತ್ತ್. ಅದ್ನ ನೋಡ್ದ ಮೇಲೆ ನಮಿಗೆ ಸಂಶಯ ಉಳ್ದಿಲ್ಲೆ. ಅದ್ರೆ ಸ್ವಲ್ಪ ಹೊತ್ತು ಕಳಿಕಾಕನ ಅದರ ಹೆಣ್ಣ್ ಸುಶೀಲ ಹಾಂಗೆ ಆ ಹರ್ಟೆ ವೇದಿಕೆಗೆ ಬಾತ್. ಆಗ ನಾನ್ ಬೈರಪ್ಪನಿಗೆ ಮನೆ ಎದುರಿನ ಹಲಸಿನ ಮರ ತೋರ್ಸಿ, 'ನೋಡು ಬೈರಪ್ಪಾ ಆ ಮರಲಿ ಒಳ್ಳೆ ಹಲಸಿನ ಹಣ್ಣು ಉಟ್ಟು ಹಣ್ಣಾಗಿರಕು, ಗಮನ ಬರ್ತುಟ್ಟು. 2 ಹಣ್ಣು

ಕುಯ್ಯಾಕು' ಅಂತ ಹೇಳ್ಟ್. ಕೂಡ್ಲೆ ಜೈರಪ್ಪನ ಹೆಣ್ಣ್ 'ಸ್ವಾಮಿ ಈ ಮುಂಡೇದನ್ನ ಮರ ಹತ್ತಿಸ್ಟೇಡಿ. 4 ವರ್ಸಗಳ ಹಿಂದೆ ಮದೆನಾಡಲ್ಲಿ ತೋಟದಲ್ಲಿ ಕೆಲ್ಸ ಮಾಡಿಕಾಕನ ಹಲಸಿನ ಮರ ಹತ್ತಿ ಕೊಂಬೆ ಮುರ್ದ್ ಕೆಳಕ್ಕೆ ಬಿತ್ತ್. ಬೀಳ್‌ಕನ ಕೆಳಗೆ ಇದ್ದ ಕಾಫಿಗಿಡದ ಗುತ್ತಿ ಅವ್ನ ತೊಡೆ ಸೀಳ್‌ತ್. ಒಂದ್ ವಾರ ಮಡಿಕೇರಿ ದೊಡ್ಡಾಸ್ಪತ್ರೇಲಿ ಮಲ್ಗಿತ್ತ್' ಅಂತ ಹೇಳ್ತ್. ಹತ್ತ್ ನಿಮಿಷಕ್ಕೆ ಮುಂಚೆ ತಾನ್ ಹೇಳಿದ್ದ ಈ ಸುಳ್ಳು ಹೀಂಗೆ ತನ್ನ ಹೆಣ್ಣಿಂದ್ಲೆ ಸಾಕ್ಷಿ ಸಮೇತ ಸುಳ್ಳು ಎಂದ್ ಸಾಬೀತಾಕನ ಜೈರಪ್ಪನಾಯಕ ಇಂಗುತಿಂದ ಮಂಗನಂಗೆ ನಾಚಿಕೆಯಾಗಿ ಬೀಡಿ ತರುವ ನೆಪ ಹೇಳಿ ಅಲ್ಲಿಂದ ಓಡಿಹೋತ್.

ಈ ಪರಿವಾರದ ಜೈರಪ್ಪನಾಯಕ ಹೆಂಡ್ತಿ ಮಕ್ಕ ಬೇಡಿಕೆ ಪೂರೈಸಿ ಸುಸ್ತಾಗಿ ಈ ಹೆಂಡತಿ ಮಕ್ಕಳು ಸಂಸಾರ ಎಲ್ಲಾ ನಸ್ವರ ಅಂತ ಭಾವಿಸಿ ಶಬರಿಮಲೆಗೆ ಯಾತ್ರೆ ಹೋಕೆ ಸುರುಮಾಡ್ತ್. ವರ್ಸ ಕಳೆದಾಂಗೆ ಈ ಯಾತ್ರೆಯ ದೆಸೆಂದ ಅವಂಗೆ ಭಕ್ತಿ ಹೆಚ್ಚಾಗಿ ಹುಚ್ಚು ಹಿಡ್ತ್. ಪ್ರತಿವರ್ಷ ಮಾಲೆ ಹಾಕಿ 'ಸ್ವಾಮಿಯೇ ಶರಣಂ ಅಯ್ಯಪ್ಪ' ಅಂತ ಕೂಗ್ತಾ ನಮ್ಮ ತೋಟದ ಲೈನ್ ಮನೆನ ಮಿನಿ ಶಬರಿಮಲೆಯಾಗಿ ಪರಿವರ್ತನೆ ಮಾಡ್ತ್.

ಹೀಗೆ ನಾಲ್ಕೈದು ವರ್ಸ ದುಡಿಯದೇ ನನ್ನ ಹತ್ರ ಸಾಲ ಮಾಡಿ ಮಾಡಿ ಸಾಲ 25,000 ದಾಟ್ತು. ಹೀಂಗಾಗಿ ನಾನೂ ಸ ದುಡ್ಡ್‌ನ ವಿಚಾರವಾಗಿ ಬಿಗಿಯಾದೆ. ಆದ್ರೂನೂ ಜೈರಪ್ಪನ ದೇವ್ರ ಹುಚ್ಚು ಕಡಿಮೆ ಆತ್ಲೆ. ಶಬರಿಮಲೆ, ತಿರುಪತಿ, ವೈಟ್ ಫೀಲ್ಡ್ ಸಾಯಿಬಾಬ, ಸುಬ್ರಹ್ಮಣ್ಯ, ಧರ್ಮಸ್ಥಳ, ಶೃಂಗೇರಿ ಹಿಂಗೆ ಕಂಡ ಕಂಡ ದೇವ್ರಿಗೆಲ್ಲಾ ಹರ್ಕೆ ಹೊತ್ಕೊಂಡು ಯಾತ್ರೆ ಹೋಕೆ ಸುರು ಮಾಡ್ತ್. ನಾವು ಅವ್ನ ಯಾತ್ರೆಗೆ ದುಡ್ಡುಕೊಟ್ಟು ಕೊಟ್ಟು ಕೈ ಖಾಲಿ ಮಾಡಿಕೊಂಡೊ. ಹಿಂದೂ ದೇವ್ರುಗಳೇ ಅಲ್ದೆ ಕೆ.ಆರ್. ನಗರದ ಡೋರ್ನ ಹಳ್ಳಿಯ ಕ್ರಿಶ್ಚಿಯನ್ ದೇವ್ರು, ಎಮ್ಮೆಮಾಡಿನ ಊರೂಸ್‌ಗಳಿಗೂ ಯಾತ್ರೆ ಹೋಗ್ತಿತ್ತ್ ಈ ಜೈರಪ್ಪನ ಸಂಸಾರ. ಅಲ್ಲಿಗೆಲ್ಲಾ ಹೋಗ್ತಿದ್ದದ್ದು ದೇವ್ರು ಮೇಲಿನ ಭಕ್ತಿಗೋ ಅತ್ವಾ ಅಲ್ಲಿ ಸಿಗ್ತಿದ್ದ ಲಾಯಕ್ಕಾದ ಮಾಸದ ಊಟಕ್ಕೊ ಯಾರ್ಗೆ ಗೊತ್ತು. ಒಟ್ನಲ್ಲಿ ಮೈ ಬೊಗ್ಗಿಸಿ ಕೆಲ್ಸ ಮಾಡುದು ಬುಟ್ಟು ಹಿಂಗೆ ದಿನಾ ಯಾತ್ರೆ ಹೋಗ್ತಿತ್ತ್. ಅದ್ಕೆಲ್ಲಾ ನಾವ್ ದುಡ್ಡ್ ಕೊಟ್ಟು ಕೊಟ್ಟು ಸೋತು ಸುಣ್ಣಾದೊ.

ಒಂದ್ಸಲ ಜೈರಪ್ಪ ಎಂತಾ ದೊಡ್ಡ ಸುಳ್ಳು ಹೇಳ್ತ್ ಅಂದ್ರೆ ರಾತ್ರಿ 8 ಗಂಟೆಗೆ ಅರ್ಧ ಮೈಲ್ ದೂರದ ಲೈನ್ ಮನೆಂದ ಓಡಿಬಂದ್ ನನ್ನ ಹೆಣ್ಣ್ ಸುಶೀಲ ಸತ್ತ್ ಹೋತ್, 1 ಸಾವಿರ ರೂಪಾಯಿ ಕೊಡಿ ಅಂತ ಕೇಳ್ತ್. ನಮಿಗೆ ಆ ಸುದ್ದಿ ಕೇಳಿ ಶಾಕ್ ಆತ್. ಸಣ್ಣ ಪ್ರಾಯದ ಹೆಣ್ಣ್ ಸತ್ತ್ ಹೋತಲ್ಲ ಅಂತ ಭಾರಿ ಬೇಜಾರಾತ್. ರಾತ್ರಿ ಆದ್ರಿಂದ ಜಾಸ್ತಿ ಮಾತಾಡದೇ 1 ಸಾವಿರ ರೂಪಾಯಿ ಕೊಟ್ಟ್ ಕಳ್ಸಿದೆ. ಬೆಳಿಗ್ಗೆ ನಂಗೆ ಮಡಿಕೇರಿ ಕೋರ್ಟ್‌ಗೆ ಹೋಕೆ ಇದ್ದದರ್‌ಂದ ಸಾವಿನ ಮನೆಗೆ ಹೋಗಿ ಮತ್ತೆ ಹೋದರಾತು ಅಂತ ಲೈನ್ ಮನೆ ಕಡೆ ಹೊರ್ಟೆ. ಅಲ್ಲಿಗೆ ಹೋಕನ ಜೈರಪ್ಪನ ಸತ್ತ್ ಹೋತ್ ಅಂತ ಹೇಳ್ದ ಆ ಸುಶೀಲ ಅಂಗಳ ಗುಡ್‌ಸುತ್ತಾ ಇತ್.

ನಂಗೆ ಆಶ್ಚರ್ಯ. ಹೆದ್ರಿಕೆ ಒಟ್ಟಿಗೆ ಆತ್. ಹಾಂಗೆ ಜೈರಪ್ಪನ ಮೇಲೆ ಸಿಟ್ಟ್‌ನೂ ಬಾತ್. ಜೈರಪ್ಪ ಮನಿ ಒಳಗಿಂದ ಮೈಮುರ್ಕೊಳ್ತಾ ಹೊರಗೆ ಬಾತ್. ನಂಗೆ ಸಿಟ್ಟ್

ಬಂದ್ 'ಏನೋ ಬೈರಪ್ಪ ನಸ್ಸತ್ರ ಆಟ ಆಡ್‌ತೋಳ. ಹೆಣ್ಣ್ ಸತ್ತ್ ಹೋತ್ ಅಂತ ನಾಟ್ಕ ಆಡಿ ಮಡ್ಡ್ ತಕೊಂಡಾ? ಅಂತ ಜೋರು ಮಾಡ್ದೆ. ಅದಕ್ಕೆ ಅವ್ಳ ಹೆಣ್ಣ್ ಸುಶೀಲನೇ, ಇಲ್ಲಾ ಸ್ವಾಮಿ ನನ್ನ ರಾತ್ರಿ ನಂಗೆ ಸ್ವಯ ತಪ್ಪಿತ್ತ್. ಅದ್ನ ನೋಡಿ ನನ್ನ ಗಂಡ ನಾನ್ ಸತ್ತೇ ಹೋದೆ ಅಂತ ತಿಳ್ಕೊಂಡ್. ನಂಗೆ ಹೀಂಗೆ ಆಗಾಗ ಆಗ್ತಾ ಇದ್ದದೆ ಅಂತ ಅದೂ ಇದು ಸುಳ್ಳು ಹೇಳ್ತ್. ಯಾಕಂದ್ರೆ ಗಂಡನ ಈ ಸುಳ್ಳು ಹೇಳ್ದ ಕಲೆನೇ ನನ್ನ ಹೊಟ್ಟೆ ತುಂಬಿಸೋ ಪ್ರಮುಖ ದಾರಿ ಅಂತ ಆ ಹೆಂಗ್ಸಿಗೆ ಚೆನ್ನಾಗಿ ಗೊತ್ತಿತ್ತ್.

ಇತ್ತಾ ಬೈರಪ್ಪ ನಮ್ಮ ತೋಟದ ಲೈನ್ ಮನೆಗೆ ಬಂದ್ 12 ವರ್ಷ ಆತ್. ಬಂದ ಅಷ್ಟು ವರ್ಷನೂ ಏನೂ ಉಪಯೋಗ ಇರ್ದ ಕೆಲ್ಸ ಮಾಡದೆ ನಮಿಗೆ ಹೊರೆ ಅನಿಸ್ತ್. ನಾನು ಅವನನ್ನು ಲೈನ್‌ಮನೆ ಬಿಡಿಸಿನೆ ಅಂತ ಅವರಿವರ ಬಳಿ ಹೇಳಿಕೆ ಸುರು ಮಾಡ್ದೆ. ಅದು ಅವನ ಕಿವಿಗೆ ತಲ್ಪಿ ನಾನು ಮನೆ ಬಿಡಕೊರೆ ಪರಿಹಾರ ಕೊಡಕು. ಬಂದ್ 12 ವರ್ಷ ಆತ್ ಅಂತ ಹೇಳ್ಲಿಕ್ಕೆ ಸುರು ಮಾಡ್ತ್. ಇದೊಂದು ಹೊಸ ಗ್ರಾಚಾರ ಆತಾಲ್ಲಾ ಅಂತ ನಂಗೆ ತಲೆ ಬಿಸಿ ಆತ್. ನನ್ನ ಹೆಣ್ಣ್ ನಾಲ್ಕು ಬಾರ್ರಿ ಮನೆಯಿಂದ ಹೊರಹಾಕಿ ಅಂತ ಒತ್ತಾಯ ಮಾಡ್ತ್. ಆದ್ರೆ ನಾನೇನಾದ್ರೂ ಅವ್ರ ಸಂಸಾರದ ಜೊತೆ ಪೆಟ್ಟುಗಿಟ್ಟಗೆ ನಿಂತರೆ ಅಲ್ಲಿ ಒಂದ್ ಕುರುಕ್ಷೇತ್ರ ಯುದ್ಧನೇ ನಡೀತಿತ್ತ್. ಅದ್ ನಂಗೆ ಇಷ್ಟ ಇತ್‌ಲೆ. ಹೀಂಗಾಗಿ ನಾನು ಮಹಾ ದೈವಭಕ್ತನಾಗಿದ್ದ ಬೈರಪ್ಪನನ್ನು ಮುಳ್ಳನ್ನು ಮುಳ್ಳಿನಿಂದ್ಲೇ ತೆಗೆಯೊಕು ಅಂತ ಆಲೋಚ್ನೆ ಮಾಡಿ ನಾನೆ ಒಂದ್ ತಗಡು ತಂದು ಅದ್ರಲ್ಲಿ ಏನೇನೋ ಗೀಚಿ, ಅದರೊಟ್ಟಿಗೆ ಅರಸಿನ ಕುಂಕುಮ, ಸಣ್ಣ ಬಳೆ, ಕೂದಲು, ಉಗುರುಗಳನ್ನು ಸಣ್ಣ ಮಡಿಕೆಯೊಳಗೆ ಹಾಕಿ ತಗಡಿನ ಶೀಟನ್ನು ಮುಚ್ಚಿ ಅದ್ನ ಟೊಯ್ನ್ ನೂಲಲ್ಲಿ ಕಟ್ಟಿ ರಾತ್ರಿ ಲೈನ್ ಮನೆ ಮುಂದೆ ಅವಂಗೆ ಗೊತ್ತಾಗದ ಹಾಂಗೆ ಹಾಕಿ ಬಂದೆ. ಮಾರ್ನೆ ದಿನ ಅದ್ನ ನೋಡಿ ಬೈರಪ್ಪ ಊರಿನ ಜ್ಯೋತಿಷ್ಯರಾಗಿದ್ದ ಶಾಸ್ತ್ರಿಗಳ ಹತ್ರ ಹೋಗಿ ವಿಚಾರಿಸಿತ್. ಶಾಸ್ತ್ರಿಗ ಗಂಭೀರ ಮುಖಭಾವದಿಂದ 'ಬೈರಪ್ಪಾ ನಿಂಗೆ ಯಾರೋ ಭಯಂಕರ ಮಾಟ ಮಾಡ್ಯೊಳೊ. ನೀನು ಅಲ್ಲಿಯೇ ವಾಸ ಇದ್ದರೆ 21 ನೇ ದಿನ ನಿಮ್ಮ ಮನೆಯಲ್ಲಿ ಯಾರಾದರೊಬ್ಬ ರಕ್ತ ಕಾರಿಕೊಂಡು ಸಾಯೋದು ಗ್ಯಾರಂಟಿ' ಅಂತ ಹೇಳಿದೊ. ಅದ್ನ ಕೇಳಿದ ಬೈರಪ್ಪ ಅಂದೆ ರಾತ್ರಿ ಸಾಮಾನು ಸರಂಜಾಮು ಸಮೇತ ಲೈನ್‌ಮನೆ ಖಾಲಿ ಮಾಡ್‌ತ್.

ನಾನು ಶಾಸ್ತ್ರಿಗಳ ಹತ್ರ ಹೋಗಿ ಭಾರಿ ಉಪಕಾರ ಆತ್ ಶಾಸ್ತ್ರಿಗಳೇ ಅಂತ 500 ರೂಪಾಯಿ ಕೊಟ್ಟು ಧನ್ಯವಾದಗ ಹೇಳ್ದೆ. ಅದಕ್ಕೆ ಮೀಸೆ ಮರೆಯಲ್ಲೇ ನಗಾಡ್ದ ಶಾಸ್ತ್ರಿಗ ನನ್ನ ಮಾತು ನಿಮ್ಮ ಮಾಟ ಎರ್ಡೂ ಸೇರಿ ಬೈರಪ್ಪನ ಇಲ್ಲಿಂದ ಓಡಿಸ್‌ತ್ ಅಂತ ಹೇಳ್ದೊ.

✍ ಪ್ರೊ. ಶಶಿಧರ್. ಬಿ.ಆರ್.
ಪ್ರಾಧ್ಯಾಪಕರು, ಇತಿಹಾಸ ವಿಭಾಗ
ಸರ್ಕಾರಿ ಪ್ರಥಮ ದರ್ಜೆ ಕಾಲೇಜ್, ಮಡಿಕೇರಿ
ಮೊ. : 9945915343

# ತಂತ್ರ

ಜೇಟಿ ಕಾಡ್ ತೋಡ್ ದಾಟಿರೆ ಸಿಕ್ಕುದು ಅಡಿಕೆ ತೋಟ. ನಾವ್ ಸಣ್ಣದರ್ಲಿ ಇರ್ಕನ ಅಲ್ಲಿಗೆ ಹೋಗಿ ಅಡಿಕೆ ಮರಂದ ಬಿದ್ದ ಹಾಳೆಗಳ್‌ನ ತಂದ್ ಆಟ ಆಡ್‌ದುತ್ತೇಳಿರೆ -ಅಜ್ಜಪ್ಪ ಕೊಲ್ಲಿ ಗುಂಡಿಲಿ ಈಜುದಕ್ಕಿಂತ ಕುಶಿ! ಈ ಆಟಕ್ಕೆ ಇಬ್ಬರು ಜೇಕ್. ಒಬ್ಬ ಕುದ್‌ಕಣಿಕ್ಕೆ ಇನ್ನೊಬ್ಬ ಎಳ್‌ಕಂಡ್ ಹೋಕೆ. ಆಟ ಅಡ್ತಾ ಆಡ್ತಾ ಚಡ್ಡಿ ಸಮೇತ ಹಾಳೆ ಹರಿಯುಕನೇ ನಮ್ಮ ಆಟಕ್ಕೆ ಸಿಕ್ಕುದು ರೆಡ್ ಸಿಗ್ನಲ್!

ಮನೆ ಒಳಗೆ ಬಾಕನ ಬೆನ್ನಿಗೆ ಹಾಳೆನ ಕಟ್ಟಿಕಂಡ್ ಬನ್ನಿನೇಂತ ತಾಯಿ ಎಚ್ಚರಿಕೆ ಕೊಡ್ತಾ ಇತ್. ನಮ್ಮಲ್ಲಿ ಅಜ್ಜಿಗಳ್ನ ನಾವ್ ತಾಯಿಂತ ಕರಿತಿದ್ದೊ. ಈಗನ ಮಕ್ಕ ಹಂಗೆ ಕರ್ರುವೆಯಾಂತ ಗೊತ್ತ್ಲೆ. ಸೂಜಿಗೆ ನೂಲ್ ಹಾಕಿ ತಾಯಿ ಕೈಗೆ ಕೊಟ್ಟರೆ ಸಾಕ್ ನಮ್ಮ ಹರ್ದ ಚಡ್ಡಿಗೆ ಸಿಕ್ತಾ ಇತ್ತ್ ಒಂದ್ ಹೊಸ ರೂಪ!

ಅಜ್ಜಿಕಗಳ್ಗೆ ಪಿಳ್ಳೆಗಳ ಮೇಲೆ ತುಂಬಾ ಪ್ರೀತಿ ಇದ್ದದೆ. ಮನೆಂದ ಎಲ್ಲಿಗಾರ್ ಹೋಕನ ಎಲ್ಲಿಗೆ ಹೋದುಂತ ಕೇಳಕ್ಕಾಗದ್. ಕಾಲಿ ಬಿಂದಿಗೆ ನೋಡಕ್ಕಾಗದ್ ಅದೂ-ಇದೂಂತ ಏನೇನೊ ಹೇಳ್ತಾ ಇದ್ದವೆ. ನಾವೆಲ್ಲ ವಿಜ್ಞಾನ ಓದಿದವ್. ವೈಜ್ಞಾನಿಕ ಮನೋಬಾವ ಬೆಳ್ಸಿಕಂಡವ್. ಇದೆಲ್ಲ ಮೂಡನಂಬಿಕೆತ ಹೇಳಿ. ಅಜ್ಜಿಕ ಹೇಳ್ದುನ್ನ ಉದಾಸೀನ ಮಾಡಿ ನಾವು ನೆಗಾಡುವೆ! ಅಜ್ಜಿಕ ಹೇಳ್ದು ನಮ್ಮ ಒಳ್ಳೆದಕ್ಕೆ ತಾನೆ?

ಒಂದ್ ಕಾಲದ ವಿಜ್ಞಾನಿಗ ಭೂಮಿ ನಿತ್ತಲ್ಲೆ ನಿತ್ತುಟ್ಟು ಸೂರ್ಯ ಭೂಮಿ ಸುತ್ತ ಸುತ್ತುತ್ತಾ ಉಟ್ಟೂಂತ ಹೇಳ್ತಾ ಇದ್ದೊ! ಗೆಲಿಲಿಯೊ ಬಂದ ಮೇಲೆ ಒಳ್ಳೊಳ್ಳೆ ದೂರದರ್ಶಕ ಯಂತ್ರಗಳ್ನ ಕಂಡ್ ಓಡ್ದ್ ಹೇಳುವೆ. ಸೂರ್ಯನ ಸುತ್ತ ಭೂಮಿ ಸುತ್ತುತ್ತಾ ಉಟ್ಟೂಂತ!. ನಾವು ಸಾಮಾನ್ಯ ಜನಗ ಅಂದ್ ಅವ್ ಹೇಳ್‌ದನ್ನೂ ಒಪ್ಪಿಕಂಡೊ! ಇಂದ್ ಇವ್ ಹೇಳ್‌ದನ್ನೂ ಒಪ್ಪಿಕಣ್ತಾ ವೋಳೊ! ನಾಳೆ ಇನ್ನೊಂದ್, ಮತ್ತೊಂದ್ ಹೇಳಿರೂ ಅದ್‌ಕ್ಕೂ ಒಪ್ಪಿಗಯೇ! ತಿರ್ಗಿಸಿ ಪರೀಕ್ಷೆ ಮಾಡುವ ಜ್ಞಾನ ಮತ್ತೆ ಸೌಕರ್ಯ ನಮ್ಗೆ ಇಲ್ಲೆ. ನಾವ್ ನಮ್ಮ ಅಜ್ಜಿಕಗಳ ಮುಂದೆ ಮಾತ್ರ ವಿಜ್ಞಾನಿಗ!

ವಿಜ್ಞಾನದ್ ಅರ್ಥ ಏನ್‌ತ ಕೇಳಿರೆ. ಅಣುಗಳ ಜ್ಞಾನ ಪಡಿಯೊದ್ ವಿಜ್ಞಾನಂತ ವಿಜ್ಞಾನಿಗ ಹೇಳ್ವೆ. ಸಂಸ್ಕೃತಲಿ ವಿಣ್‌ತೇಳಿರೆ ಅಣು. ಅದ್ಕೆ ವಿಣ್‌ಜ್ಞಾನನ ವಿಜ್ಞಾನಂತ ಹೇಳ್ವೆ. ಅದೇ ಪ್ರಶ್ನೆನ ತತ್ವಜ್ಞಾನಿಗಳ್ಗೆ ಕೇಳಿರೆ. ವಿಷ್ಣು ಭಗವಾನ್‌ದ್ ಜ್ಞಾನ ಪಡಿಯುದು ವಿಜ್ಞಾನಂತ ಹೇಳ್ವೆ! ಅದ್ಕೆ ವಿಷ್ಣು ಜ್ಞಾನನ ವಿಜ್ಞಾನಂತ ಹೇಳ್ವೆ. ಅಣುಗಳ ಜ್ಞಾನ ಪಡಿಯುವ ವಿಜ್ಞಾನ ವಸ್ತು ವಿಜ್ಞಾನ. ಅಖಿಲಾಂಡ ಕೋಟಿ ಬ್ರಹ್ಮಾಂಡ ನಾಯಕ ಶ್ರೀ ವೆಂಕಟರಮಣ ಸ್ವಾಮಿದ್ ಜ್ಞಾನ ಪಡಿಯುವ ವಿಜ್ಞಾನ ಆಧ್ಯಾತ್ಮ ವಿಜ್ಞಾನ. ವಸ್ತು ವಿಜ್ಞಾನನ ಯಂತ್ರಗಳ್‌ಂದ ತಿಳ್ಕಣಕ್ಕ್. ಆಧ್ಯಾತ್ಮ ವಿಜ್ಞಾನನ ಮಂತ್ರಗಳ್‌ಂದ ತಿಳ್ಕಣಕ್ಕ್. ವಸ್ತು ವಿಜ್ಞಾನ ಇಂಟರ್‌ನೆಟ್ ಸಂಪರ್ಕ ಇಲ್ಲದ ಕಂಪ್ಯೂಟರ್ ತರ. ಆಧ್ಯಾತ್ಮ ವಿಜ್ಞಾನ

ಇಂಟರ್ ನೆಟ್ ಸಂಪರ್ಕ ಇರುವ ಕಂಪ್ಯೂಟರ್ ತರ. ಇವ್ ಎರ್ಡ್ ವಿಜ್ಞಾನಗ ಒಂದಾದರೆ ಮಾತ್ರ ಅದ್ ನಿಜಾದ ವಿಜ್ಞಾನ ಆದೆ. ವಸ್ತು ವಿಜ್ಞಾನವ್ ಗೋಡೆನ ಆಧ್ಯಾತ್ಮ ವಿಜ್ಞಾನದ ತಳಪಾಯ ಮೇಲೆ ಕಟ್ಟರೆ ಮಾತ್ರ ಸಮೂದಾಯ ಭವನ ಜಿಗಿಯಾಗಿ ನಿತ್ತದೆ!

ನಾಸಾದ ವಿಜ್ಞಾನಿಗ, ಕ್ಯೂರಿಯಾಸಿಟಿ ರೋವರ್‌ತೇಳುವ ನೌಕೆನ ಮಂಗಳ ಗ್ರಹಲಿ ಇಳ್ಸಿ ಸಂಶೋಧನೆ ಮಾಡ್ತಾವ್ರೊಳೊ. ಅಲ್ಲಿ ಅವ್ಕ "ಪರ್ಸೀವರೆನ್ಸ್ ವ್ಯಾಲಿ" ತೇಳುವ ಜಾಗಲಿರುವ ಕಲ್ಲ್‌ದ್ ಹಾಳೆಗ ಭೂಮಿಲಿ ಇರುವ ಕಲ್ಲ್‌ದ್ ಹಾಳೆಗೆ ಹೋಲಿಕೆ ಆಗುವ ಸಂಗತಿ ತಿಳ್ದ್ ಬಂದುಟ್ಟು! ನಮ್ಮ ಪೂರ್ವಕಾಲದ ಋಷಿ ಮುನಿಗ "ಶಕ್ತಿ ಹಸ್ತಾಯ ವಿದ್ಮಹೇ ಭೂಮಿ ಪುತ್ರಾಯ ಧೀಮಹೀ ತನ್ನೋ ಅಂಗಾರಕ ಪ್ರಚೋದಯಾತ್" ತ ಮಂಗಳ ಗ್ರಹಕ್ಕೆ ಸಂಬಂದ ಪಟ್ಟ ಒಂದ್ ಮಂತ್ರನ ಬರ್ದ್ ಮಡಿಗಿಯೊಳೊ. ಅವ್ ಮಂಗಳ ಗ್ರಹನ ಭೂಮಿದ್ ಪುತ್ರ – ಅಂದರೆ ಭೂಮಿದ್ ಮಂಜಂತ ಹೇಳಿದ್ದೊ. ಈಗ ಕಂಡ್ ಬಂದ ಕಲ್ಲ್‌ದ್ ಹೋಲಿಕೆ ತರ, ಇನ್ನೂ ಎಷ್ಟೋ ಹೋಲಿಕೆಗಳ್ನ ಋಷಿಮುನಿಗ ತಮ್ಮ ಆಧ್ಯಾತ್ಮ ವಿಜ್ಞಾನಂದ ತಿಳ್ಕಂಡಿದ್ದೊ ಮತ್ತೆ ಅಂತ ಹೋಲಿಕೆಗ ಇರ್ಧರ್‌ಂದ ಮಂಗಳ ಗ್ರಹನ ಭೂಮಿದ್ ಮಂಜಂತ ಅಂದೇ ಹೇಳಿದ್ದೊ!

ಇಡೀ ಬ್ರಂಹಾಂಡ ದೈವ ಕಣಗಳ್‌ಂದ ತುಂಜಿಕಂಡುಟ್ಟು. ದೈವ ಕಣಗಳ್‌ಂದ ಅಣು, ಪರಮಾಣುಗ ಆಗಿ, ಪೃಥ್ವಿ, ನೀರ್, ಬೆಂಕಿ, ಗಾಳಿ, ಆಕಾಸ ಐದ್ ಪಂಚಭೂತಗ ಆದವೆ. ಅದೂ ಅಲ್ಲದೆ, ಸ್ಪರ್ಶ, ಶಬ್ದ, ರೂಪ, ರಸ, ಗಂಧ, ಐದ್ ಪಂಚತನ್ಮಾತ್ರಗ ಈ ಪಂಚ ಭೂತದೊಟ್ಟಿಗೆ ಓಳೊ. ಪೂರ್ವಕಾಲದ ಋಷಿಮುನಿಗ ತಮ್ಮ ತಪ ಶಕ್ತಿಂದ ಈ ಪಂಚಭೂತಗಳ ಮತ್ತೆ ಪಂಚತನ್ಮಾತ್ರಗಳ ಗುಟ್ಸ್‌ನ ಅಂದರೆ ಪ್ರಕೃತಿ ನಿಯಮನ ತಿಳ್ಕಂಡ್ ಯಂತ್ರ, ಮಂತ್ರ, ತಂತ್ರ ವಿದ್ಯೆಗಳ್ನ ಹುಟ್ಟು ಹಾಕಿಯೊ. ಪ್ರತಿಯೊಂದ್ ಸದ್‌ಗು, ರೂಪಕ್ಕು ಒಂದೊಂದ್ ಫಲಗ ಇರ್ದುನ ತಿಳ್ಕಂಡ್ ಮನ್ಸನ ಮಾತಿಗು, ನಡತೆಗೂ ಶಾಸ್ತ್ರ ಸಂಪ್ರದಾಯನ ಮಾಡ್ದೊ.

ಹಗ್ಲ್ ನಕ್ಷತ್ರಗ ಕಾಂಬದುಲ್ಲೆ ತೇಳಿ, ನಕ್ಷತ್ರಗ ಇಲ್ಲೆಂತ ಹೇಳುದ್ ಎಷ್ಟು ತಪ್ಪೊ, ಹಂಗೆ ನಮ್ಮ ಅಜ್ಜಿಕ ಹೇಳುವ ಸಂಗತಿಗಳ ಕಾರಣ ಗೊತ್ತಿಲ್ಲದೆ ಮೂಡನಂಬಿಕೆ, ಪೊಟ್ ಶಾಸ್ತ್ರತೇಳಿ ಉದಾಸೀನ ಮಾಡಿ ನೆಗಾಡುದು ಅಷ್ಟೇ ತಪ್ಪು! ಇದ್ಕೆಲ್ಲಾ ಉತ್ತರನ ಕಂಡ್‌ಕಣುವ ವಿದ್ಯೆನ ನಾವೇ ಕಲಿಯಕು. ಅದ್ಕೆ ಇರುವ ಉಪಾಯ ಒಂದೇ, ಯಂತ್ರಂದ ತಿಳ್ಕಣುವ ವಸ್ತು ವಿಜ್ಞಾನದ ಒಟ್ಟಿಗೆ ಮಂತ್ರಂದ ತಿಳ್ಕಣುವ ಆಧ್ಯಾತ್ಮ ವಿಜ್ಞಾನನ ಕಲಿಯುವ ತಂತ್ರ ಮಾಡೋಕ್ ಅಷ್ಟೆ!

**ಹೊಳೆಕರೆ ಚೆಂಗಪ್ಪ**
ನಂ. 30, 3ನೇ ಹೆಚ್. ಕ್ರಾಸ್
ರುಕ್ಮಿಣಿನಗರ, ನಾಗಸಂದ್ರ, ಬೆಂಗಳೂರು.
ಮೊ. : 9945791209

# ಮಾನವೀಯತೆನ ಬೆಲೆ

ಸುಬ್ಬಣ್ಣ–ಗಂಗಾ ದಂಪತಿಗೆ ಗಂಡು ಮಕ್ಕ ಇಲ್ಲೆ. ಎರ್ಡ್ ಜನ ಹೆಣ್ಮಕ್ಕ. ದೊಡ್ಡವ್ಳು ಭವ್ಯ, ಸಣ್ಣವ್ಳು ದಿವ್ಯ. ನಾಕ್ ಎಕ್ರೆ ಜಾಗೆ ಉಟ್ಟು. ಇಬ್ಬರ್ ಗೂಡೆಗಳ ಲಾಯ್ಕ್ ಓದ್ಸಿದೋ. ಯಾವುದಕ್ಕೂ ಕಮ್ಮಿ ಮಾಡ್ತ್ಲೆ. ದೊಡ್ಡವಳ ಎಂ.ಕಾಂ., ಸಣ್ಣವಳ ಇಂಜಿನಿಯರಿಂಗ್ ಓದ್ಸಿದೊ. ಮಕ್ಕಳು ಹಾಂಗೆ ಲಾಯ್ಕ ಕಲ್ತವೆ. ದೊಡ್ಡವ್ಳು ಒಂದ್ ಒಳ್ಳ ಕಂಪನಿಗೆ ಸೆಲೆಕ್ಟ್ ಆತ್. ಒಳ್ಳ ಸಂಬಳ. ನಿಧಾನಕೆ ಸಣ್ಣವ್ಳುಳ್ಳು ಜಾಬ್‌ಗೆ ಸೇರ್ದ. ಸುಬ್ಬಣ್ಣಂಗೆ ಬಾರಿ ಖುಷಿ ಆದೆ. ಇತ್ತ ಮಕ್ಕಳ ಎಜ್ಯುಕೇಶನ್ ಮುಗ್ತ್. ತಾಕನ ಮದ್ವೆ ಮಾಡಿಕೆ ಮಂಡೆ ಬೆಚ್ಚ ಸುರಾದೆ. ಇಬ್ಬರ್ನೂ ಒಳ್ಳ ಸಿರಿಮಂತರ ಮನೆಗೆ ಕೊಡೊಕುಂತ ಸುಬ್ಬಣ್ಣನ ಆಸೆ. ಭವ್ಯಂಗೆ ಹೈದ ಹುಡ್ಕಿಕೆ ಸುರು ಮಾಡ್ದೆ ಸುಬ್ಬಣ್ಣ. ಈ ವಿಷಯ ತಿಳ್ದ ಭವ್ಯ, ರಾಕೇಶ್ ನ ಪ್ರೀತಿ ಮಾಡ್ವ ವಿಸಯ ಹೇಳ್ದೆ. ಸುಬ್ಬಣ್ಣನ ಪಿತ್ತ ನೆತ್ತಿಗೇರ್ದೆ. ಹೋಗಿ ಹೋಗಿ ಪರ ಜಾತಿ ಹೈದನ ಸಿಕ್ಕಿದ ನಿಂಗೆ ಹೇಳಿ ಕೆಪ್ಪೆಗೇರ್ದು ಬಾರ್ಸಿದ. ನಾವ್ ಹೇಳ್ದ ಹೈದನ ಮದ್ವೆ ಆಕುತ ಹೇಳ್ತ್. ಗೂಡೆ ಸುಮಾರ್ ಸಲ ಕೇಳ್ದೆ



ಹೈದನ ಬಗ್ಗೆ ಎಲ್ಲಾ ಹೇಳ್ದೆ ಮನೆಲಿ. ಆದರೆ ಸುಬ್ಬಣ್ಣ ಮಗಳ ಮಾತಿಗೆ ಬೆಲೆನೆ ಕೊಟ್ಟಿತ್ಲೆ. ಸುಬ್ಬಣ್ಣ ಮಾರ್ನೆ ದಿನನೆ ಒಂದು ಹೈದನ ಕಡೆಯವರ ಗೂಡೆ ನೋಡಿಕೆ ಬಾಕೆ ಹೇಳ್ದೆ. ಈ ವಿಷಯನ ಭವ್ಯ, ರಾಕೇಶ್ ಗೆ ಹೇಳ್ದೆ. ರಾಕೇಶ್‌ನ ಮನೆಲಿ ಲವ್ ಮ್ಯಾರೇಜ್ ಗೆ ಒಪ್ಪಿಕೊಂಡವೆ. ಆದರೆ ಗೂಡೆ ಮನೆಲಿ ಏನ್ ಹೇಳ್ರು ಒಪ್ಪಿತ್ಲೆ. ಕಡೆಗೆ ಇಬ್ಬರು ರಿಜಿಸ್ಟರ್ ಮ್ಯಾರೇಜ್ ಆಗೊಮೊತ ನಿರ್ಧಾರಕ್ಕೆ ಬಂದ್ ಮದ್ವೆ ಮಾಡ್ಕೊಂಡು ಆಶೀರ್ವಾದ ಕೇಳಿಕೆ ಗೂಡೆ ಮನೆಗೆ ಬಾಕನ ಸುಬ್ಬಣ್ಣ–ಗಂಗಾ ದಂಪತಿಗೆ ಬಾರಿ ಬೇಜ್ಜ ಆದೆ. ಹಾಳಾಗಿ ಹೋಗಿತಾ ಶಾಪ ಹಾಕ್ದೆ. ಇಲ್ಲಿಗೆ ಮನೆ ಋಣ ತೀರ್ತ್. ಇನ್ನು ನಂಗೆ ನಿಂಗೆ ಯಾವ ಸಂಬಂಧವೂ ಇಲ್ಲೆ ಹೇಳಿ ಕಳ್ಸುವೆ. ಗೂಡೆ ಕಣ್ಣೀರು ಹಾಕಂಡು ಹೈದನ ಮನೆಗೆ ಹೋದೆ. ಹೈದನ ಮನೆಲಿ ಲಾಯ್ಕಲಿ ನೋಡಿ ಕಂಡಿವೆ. ಗೂಡೆ ನಿಧಾನಕ್ಕೆ ಬೇಜಾರ್ ಪೂರಾ ಮರ್ತದೆ. ಅತ್ತೆ ಮಾವಂಗೆ ಹೊಂದಿಕ್ಕೊಂಡು ಹೋದೆ.

ಇತ್ತ ಸುಬ್ಬಣ್ಣ ದಂಪತಿಗ ಊರ್ನ ಜನಗಳ ಚುಚ್ಚು ಮಾತುಂದ ಬಾರಿ ಸಂಕಟ. ಅವಮಾನ ಪಟ್ಟವೆ. ಅಪ್ಪ ಅಮ್ಮನ ದಿವ್ಯ ಸಮಾಧಾನ ಮಾಡ್ದೆ. ನಿಧಾನಕ್ಕೆ ಎಲ್ಲಾ

ಮರ್ತವೆ. ಹೋದ ಮರ್ಯಾದಿನ ಇನ್ನೊಬ್ಬಳ ಸರಿಲೀ ಮದ್ವೆ ಮಾಡಿ ಪಡ್ಕಂಕುತ ನೆಸ್ಕಿಕಂಡವೆ. ಇತ್ತ ದಿವ್ಯಂಗೆ ಒಂದು ಶ್ರೀಮಂತ ಹೈದನಾ ನೋಡಿ ಭಾರಿ ಆಡಂಬರಲಿ ಮದ್ವೆ ಮಾಡ್ವೆ. ಊರು ತುಂಬಾ ಕೊಟ್ಟಿಕೊಂಡು ಬಂದವೆ. ಸುಬ್ಬಣ್ಣಂಗೆ ಈಗ ಸಮಾಧಾನ ಆದೆ.

ಮದ್ವೆ ಆದ ಸುರುಲಿ ಲಾಯ್ಕ ಇದ್ದ ದಿವ್ಯಂಗೆ ನಿಧಾನಲಿ ಹೈದನ ಕಡೆಯವ್ರ ಕಿರುಕುಳ ಕೊಡಿಕೆ ಸುರು ಮಾಡ್ವೆ. ಆದರೆ ಈ ವಿಷ್ಯನ ಮನೆಲೀ ಹೇಳದೆ ಮನಸ್ಲೇ ದುಃಖ ನುಂಗಿ ಕೊಂಡವೆ ದಿವ್ಯ. ಇತ್ತ ಸುಬ್ಬಣ್ಣ ಅಳಿಯ ತಮ್ಮ ಲಾಯ್ಕ ನೋಡ್ವು ಹೇಳಿ ಆಸ್ತಿನ ಪೂರಾ ದಿವ್ಯನ ಗಂಡನ ಹೆಸ್ರಿಗೆ ಬರ್ದು ಕೊಟ್ಟವೆ. ಇನ್ನು ನಾವ್ಗೆ ಮುಂದೆ ಚಿಂತೆ ಇಲ್ಲೆ ಎಲ್ಲಾ ಅಳಿಯ ನೋಡಿ ಕಂಡದೆತಾ ಗಂಗಾಂಗೆ ಹೇಳ್ವೆ. ಒಂದು ದಿನ ನಡು ಮಧ್ಯಾನ ಫೋನ್ ರಿಂಗಾದೆ. ಕಾಲ್ ರಿಸೀವ್ ಮಾಡ್ವ ಸುಬ್ಬಣ್ಣಂಗೆ ಶಾಕ್ ಆದೆ. ದಿವ್ಯ ಆತ್ಮಹತ್ಯೆ ಮಾಡಿಕೊಂಡ ವಿಷಯ ತಿಳ್ಸಿ ಕಾಲ್ ಕಟ್ ಮಾಡ್ವೆ. ಸುಬ್ಬಣ್ಣ ದಿವ್ಯನ ಮನೆಗೋಗಿ ನೋಡ್ವನಾ ನಿಜ ವಿಷಯ ಗೊತ್ತಾದೆ. ದಿವ್ಯನ ಡೆತ್ ನೋಟ್ ನೋಡಿ ಎಲ್ಲಾ ಸತ್ಯ ಗೊತ್ತಾಕನ ಸುಬ್ಬಣ್ಣ ತಲೆ ತಿರ್ಗಿ ಬಿದ್ದವೆ. ಜೆನ್ಸ್ಸ, ಆಸ್ತಿ ಗೋಸ್ಕರ ಮದ್ವೆ ಆಗಿರ್ದು. ಅದಲ್ಲದೆ ಅವಂಗೆ ಇನ್ನೊಂದು ಮದ್ವೆ ಆಗಿರ್ದು ಗೊತ್ತಾದೆ. ಸುಬ್ಬಣ್ಣ-ಗಂಗಾ ದಂಪತಿಗಳಿಗೆ ದಿಕ್ಕೇ ತೋಚದಂತಾಗಿದೆ. ಭಾರಿ ಬೇಜಾರ್‌ಲೀ ದಿನ ಕಳ್ದವೆ. ಮುಂದಿನ ಪರಿಸ್ಥಿತಿ ಬಗ್ಗೆ ಯೋಚನೆ ಮಾಡ್ವೆ.

ದಿವ್ಯ ಆತ್ಮಹತ್ಯೆ ಮಾಡಿಕೊಂಡ ವಿಷಯ ಭವ್ಯಂಗೆ ಗೊತ್ತಾಗಿ ಅಪ್ಪ ಅಮ್ಮನ ನೆಂಪಾದೆ. ಭಾರಿ ಬೇಜಾರಲಿ ರಾಕೇಶ್ ಮತ್ತೆ ಮಕ್ಕಳ ಕರ್ಕೊಂಡು ಅಪ್ಪ ಅಮ್ಮನ ನೋಡಿಕೆ ಕಾರುಲಿ ಹೋದವೆ. ಕಾರ್ ಬಂದು ಜಾಲ್ನ ಕರೆಲಿ ನಿಲ್ಕನ ಸುಬ್ಬಣ್ಣ ಹೊರಗೆ ಬಂದವೆ. ಅಪ್ಪ -ಅಮ್ಮ ಪರಿಸ್ಥಿತಿ ನೋಡಿ ಭಾರಿ ಸಂಕಟ ಪಟ್ಟದೆ ಭವ್ಯ. ಸಣ್ಣ ಮಗಳ ಸಂಸಾರ ಹಾಳಾತು. ದೊಡ್ಡ ಮಗಳ ಸಂಸಾರ ಸರಿ ಉಟ್ಟಲ್ಲ ಹೇಳಿ ಸ್ವಲ್ಪ ಸಮಾಧಾನ ಆದವೆ ಸುಬ್ಬಣ್ಣ. ಭವ್ಯಂಗೆ ತನ್ನ ತವರು ಮನೆ ಸ್ಥಿತಿ ನೋಡಿ ಭಾರಿ ಬೇಜಾರದೆ. ರಾಕೇಶ್ ಅತ್ತೆ -ಮಾವಂಗೆ ಸಮಾಧಾನ ಮಡ್ವೆ. ಅದ್ದು ಆದೋತು ನೀವ್ಗೆ ನಾವ್ರೋಳ ಹೇಳಿ ಸಮಾಧಾನ ಮಾಡ್ವೆ. ಅಂದು ಶಾಪ ಹಾಕಿದ ಕೈಗ ಇಂದು ಆಶೀರ್ವಾದ ಮಾಡ್ವ. ಜಾತಿ ಮುಖ್ಯ ಅಲ್ಲ ಮಾನವೀಯತೆ ಮುಖ್ಯ ಮಾನವೀಯತೆನ ಶ್ರೀಮಂತಿಕೆಂದ ಪಡಿಯಕಾದ್ಲತ ಅರ್ಥ ಆದೆ ಸುಬ್ಬಣ್ಣಂಗೆ. ಇಬ್ಬನ್ನೂ ರಾಕೇಶ್ ಮನೆಗೆ ಕರ್ಕೊಂಡು ಹೋದೆ. ಅತ್ತೆ-ಮಾವನ ಲಾಯ್ಕಲಿ ನೋಡಿ ಕಂಡದೆ ರಾಕೇಶ್. ಪುಳ್ಳಿಗಳೊಟ್ಟಿಗೆ ಆಟ ಆಡಿಕಂಡು ನಿಧಾನಕ್ಕೆ ಎಲ್ಲಾ ಮರ್ತವೆ ಸುಬ್ಬಣ್ಣ ದಂಪತಿಗ.

**ದೀಕ್ಷಾ ಕೆ. ಐವರ್ನಾಡು**
ಐವರ್ನಾಡು ಮನೆ,
ಅಂಚೆ ಮತ್ತು ಗ್ರಾಮ, ಸುಳ್ಯ ತಾಲೂಕು, ದ.ಕ-.574239

# ನುಕ್ಕುಳನ್ನು ಹುಡ್ಕಿಕಂಡ್

ಸಾಮಾನ್ಯವಾಗಿ ಸ್ವಲ್ಪ ಪಂಡ್‌ನ ಕಾಲಕ್ಕೆ ಹೋದರೆ, ನಾವು ಯಾರೂ ಕಾಸ್ ಕೊಟ್ಟು ತರ್ಕಾರಿ, ಸಾಮಾನ್ ತಾತಿತ್ಲೆ. ಪೂರಾ ವರ್ಸಕಾಗುವಷ್ಟ್ ತರ್ಕಾರಿಗಳ್ನ ನಾವೇ ಬೆಳೆತಿದ್ದ್ಯೋ. ಅಂದರೆ ಈ ಸೋಂತೆ ಕಾಯಿ, ಗೆಣ್ಸ್, ಕುಂಬಳಕಾಯಿ, ಸೋರೆಕಾಯಿ ಇಂತ ಹಾಳಾಗದ ತರಕಾರಿಗಳ್ನೆಲ್ಲಾ ನಾವು ಛತ್ತ್‌ದ ಪತಾಯ ಇರುವ ಕೋಣೆಲಿ ಇಡ್ತಿದ್ದ್ಯೋ. ಹಂಗಾಗಿ ದೊಡ್ಡ ದೊಡ್ಡ ಅಡಿಗೆಗಾಕನ ಇವೆಲ್ಲಾ ಅಟ್ಟಂದ ಇಳಿತಿದ್ದ್ಯೋ. ಇನ್ನು ಮಾಮೂಲು ಗೈಪುಗೆ ನಾವು ಮಕ್ಕಳೇ ಹೋಗಿ ಹೊಳೆ ಬದಿಂದ ಚೆರ್ಮೆ ಕೊಡಿ, ಕೆಸುನ ದಂಟ್, ಚಗ್ತೆ ಸೊಪ್ಪು, ಗಿಣಿಕೆ ಸೊಪ್ಪು ಹಿಂಗೆ ಬೇಕಾದಷ್ಟ್ ನಮೂನೆಗ ನಮ್ಮ ಹತ್ರ ಪತ್ರನೇ ಸಿಗ್ತಿದ್ದ್ಯೋ. ಛತ್ತ ನಾವೇ ಬೆಳೆವ ಕಾರಣ ಉಂಬುವ ಹುಗ್ಗಗೆ ತಲೆಬಿಸಿ ಇತ್ಲೆ. ಇನ್ನ್ ಮಳೆ ಸುರು ಆಕನ ನಾಯಿ ಮರಿ ಅಣ್ಬು, ಹೆಗ್ಗಳುಂಬು, ಹುಲ್ಲಂಣ್ಬು, ಸುರ್ಳಿ ಅಣ್ಬು. ಹಿಂಗೆ ಇವೇ ನಮಿಗೆ ಬಾಳಾ ಗಮ್ಮತ್ತ್. ಮಣ್ಣ್‌ನ ಅಳಗೆಲಿ ಮಾಡ್ರೆ ಅದರ ಒಂದು ರುಚಿನೇ ಬೇರೆ. ಇನ್ನು ಮಳೆಗಾಲ ಇಡೀ ನಮಿಗೆ ಪಣ್ಬುಳಿ ಹೆಕ್ಕುವ ಕೆಲ್ಸ. ಎಸ್ಟೋ ವರ್ಸಕ್ಕಾಗುವಸ್ಟು ಹುಳ್ನೀರ್ ಮಾಡಿ ಮಡ್‌ಗ್ತಿದ್ದ್ಯೋ. ದಿನ ಹೋದಂಗೇ ಹುಳಿ ನೀರ್‌ನ ಕಡ್ಪು ಹೆಚ್ಚಾದು ಗಡ. ನೆಂಟ್ರ್‌ಗಳ ಮನೇಲಿ ಹುಳಿ ಇಲ್ಲದಿದ್ದರೆ ಕುಪ್ಪಿಲಿ ತುಂಬುಸಿ ಕೊಡ್ತಿದ್ದ್ಯೋ. ಮತ್ತೆ ಹುಳಿ ತೊಪ್ಪ್‌ಗೂ ಅದರ ನೀರುಗೂ ಬಾರೀ ರೇಟ್. ಹಂಗೆ ಮಳೆಗಾಲದ ಕರ್ಜಿಗೆ ನಾವ್ಸ್‌ಗೆ ಇದೇ ಸಾಕಾತಿತ್ತ್. ಹಂಗೆ ಈಚೆ ನಮ್ಮ ಕನ್ನಡ ಜಿಲ್ಲೆ ಕಡೆ ಬಂದರೆ ಅವು ಉಂಡೆ ಹುಳಿ ತೊಪ್ಪ್ ಸಣ್ಣಗೆ ಬಾಳಿ ಒಣ್ಗಿಸಿ ಮಡ್ಗ್ತಿದ್ದ್ಯೋ. ಕೊಡ್ಗನವು ಅಪಿಕೆ ಹುಳ್ನೀರು ಕೊಟ್ಟರೆ ಅವು ಉಂಡೆ ಹುಳಿ ಹೊಡಿ ಮಾಡಿ ಕೊಡ್ತಿದ್ದ್ಯೋ. ಎರಡಕ್ಕೂ ಅದರದೇ ಆದ ಬೇರೆ ರುಚಿ ಇತ್ತ್. ಅದೇ ಹೊತ್ತ್ಲಿ ಬೆಮ್ರು ಹಿಂಡ್ಲಿಗೆ ಹೋಗಿ ಸುರೂಗೇ ಕಣಿಲೆ ನೋಡಿ ಹುಡ್ಕಿ ತರ್ತಿದ್ದ್ಯೋ. ಅದರ ರುಚಿ ಹೇಳಿ ಸುಖ ಇಲ್ಲೆ.



ಎಲ್ಲಾ ಬುಟ್ಟು ನಮ್ಮವ್ವ ಗೈಪುಗೆ ಏನು ಇಲ್ಲೆ ಮಕ್ಕಳೆತಾ ಹೇಳಿರೆ ನಾವು ಹೊಳೆ ಬದಿಗೆ ಮೀನ್ ಹಿಡಿಯಕೆ, ಎಸುಂಡು ಹಿಡಿಯಕೆ ಹೋತಿದ್ದ್ಯೋ. ಅದ್ ನಮಿಗೆ ಬಾರಿ ಕುಶಿನ ಕೆಲ್ಸ ಅದಿಕ್ಕೆ ನಮಿಗೆ ಸುಲಭಕ್ಕೆ ಸಿಗ್ತಿದ್ದದ್ದು ಮಣ್ಣ್‌ಲಿ ಇರುವ ನುಕ್ಕುಳು. ಸ್ವಲ್ಪ ಮಣ್ಣು ಒಕ್ಕಿರೂ ಸಾಕ್. ಪಿತಪಿತ ತೇಳಿಕಂಡ್ ನುಕ್ಕುಳುಗ ಮೇಲೆ ಎದ್ದುಕಂಡ್ ಕುಣ್ದ್

ಕಂಡ್ ಬರ್ತಿದ್ದೊ. ಐನ್ಸ್ ಜೂರು ಜಾಸ್ತಿ. ಕತ್ತಿಲೋ. ಕೊಟ್ಟುಲಿಯೋ. ಮಣ್ಣ್ ಒಕ್ಕಿಬುಟ್ಟರೆ ಮುಗ್ತ್. ಎಲ್ಲಾ ಅರ್ಥ ತುಂಬಾಗಿ ಬುಡ್ತಿದ್ದೊ. ಆದರೆ ತುಂಬಾವರೂ ಸಹ ತಲೆ ಕಡೆನ ನುಕ್ಕುಳುಗ ಸಾಯುತಿತ್ತ್. ನಾವು ಈ ನುಕ್ಕುಳುನ ಗಾಳಕ್ಕೆ ಸಿಕ್ಕಿ ಮೀನ್ ಹಿಡಿತಿದ್ದೊ. ಆ ದಿನ ಏನೋ ಹೊಳೆ ಮೀನ್. ಎಸುಂಡ್ ಸಿಗ್ತಿತ್ತು. ನಮಗೆ ಬರ್ಜರಿ ಊಟ. ಜಾಸ್ತಿ ಸಿಕ್ಕಿರೆ ಅಪ್ಪ ಅದನ್ನ ಬೆಸಗೆಲಿ ಒಣ್ಗಿಕೆ ಇಸಿ. ಯಾರಾರ್ ನೆಂಟ್ರ್ ಬಾಕನ ಬಟಾಟೆ ಗೆಡ್ಡೆ ಒಟ್ಟಿಗೆ ಹಾಕಿ ಸಾರ್ ಮಾಡ್ರೆ. ತಿಂಬಕೆ ಹುಳ್ಳಹುಳ್ಳಂಗೆ ಆಗ್ತಿತ್ತ್. ಆದರೆ ಎಷ್ಟೋ ನುಕ್ಕುಳುಗ ಮಾತ್ರ ಸತ್ತೋಗ್ತಿದ್ದೊ. ಮತ್ತೊಮ್ಮೆ ಮಣ್ಣ್ ಒಕ್ಕಿರೂ ನಮಗೆ ನುಕ್ಕುಳು ಸಿಕ್ಕಿ ಬುಡ್ತಿತ್ತ್. ಆದರೆ ಆಗ ನಮಗೆಲ್ಲ ನಮ್ಮ ಮಣ್ಣ್‌ನ ಗೊಬ್ಬರ ಮಾಡ್ದು ಈ ನುಕ್ಕುಳ್ ಅಂತ ಗೊತ್ತೇ ಇತ್ಲೆ.

ಬೇಸಿಗೆಲಿ ನಾವು ಅಕ್ಕಿ ಗಣ್ಣ್ ಎಳ್ಳಿಕೆ ಬಾಣೆಗೆ ಕೊಟ್ಟು ಓಡ್ಸಂಡ್ ಹೋತಿದ್ದೊ. ಆ ಅಕ್ಕಿ ಗಣ್ಣ್ ಬೆಣ್ಣೆ ಬೆಣ್ಣೆನಂಗೆ ಒಳಗೆ ಇರ್ತಿತ್ತ್. ಒಳ್ಳೆನ ಬುಡ ನೋಡಿ ಮಣ್ಣ್ ಎಳ್ಳಿಕನ ಎಷ್ಟೊ ಎರೆಹುಳಗ ಸತ್ತೋಗುತ್ತಿದ್ದೊ. ನಮಗೆ ಅದರ ಬಗ್ಗೆ ಬೇರೆ ದಾರಿನೂ ಇತ್ಲೆ ಬುಡಿ. ಆದರೆ ಮುಂದೊಂದು ದಿನ ನುಕ್ಕುಳುಗ ಪೂರ ಕಡ್ಮೆ ಆಗಿ ನಮ್ಮ ಮಣ್ಣ್‌ಗೆ ಬಾರಿ ತೊಂದರೆ ಆದೇ ಅಂತ ನಾವುಗೆ ಗೊತ್ತೇ ಇತ್ಲೆ. ಈಗ ನಾವು ಮಣ್ಣ್‌ಗೆ ಕಂಪೆನಿ ಗೊಬ್ಬರ. ಅದೂ ಇದೂ ಸುಡುಗಾಡ್ ಅಂತ ಹಾಕಿ. ಒಮ್ಮೆಗೇ ಜಾಸ್ತಿ ಫಸಲ್ ಪಡ್ಡ್. ಕೈಲಿ ಹಣೀಸ್ ಕಾಸ್ ಓಡಾಡುವ ಅಂಬೇಪ್ರ್ಗಲಿ ನಮ್ಮ ನುಕ್ಕುಳುಗ ಅಲ್ಲೇ ಏಲಿ ಏಲಿ ಒದ್ದಾಡಿ ಸತ್ತ್ ಹೋದ್ ನಮ್ಮ ಗಮನಕ್ಕೆ ಬಾತೇ ಇಲ್ಲೆ. ಈಗ ನೋಡಿ ನಮ್ಮ ಅವಸ್ಥೆ. ಯಾರಿಗೆ ಹೇಳೊಕು ಈಗ? ಎರೆಗೊಬ್ಬರ ಮಾಡುವ ಘಟಕಗಡ. ಮತ್ತೊಂದು. ಮಗದೊಂದು ಅಂತ ಈಗ ದುಡ್ಡು ಮಾಡಿಕೆ ಮತ್ತೆ ಏನೆಲ್ಲಾ ಕಸರತ್ತ್ ಗ ಆಗುತ್ತೊಳೊ. ಏನೇ ಮಾಡಿರೂ. ಎಷ್ಟೇ ಕಷ್ಟ ಬಂದರೂ ಭೂಮಿಲಿ ಬೆಳೆ ಲಾಯಿಕ ಬೆಳಯೋದೇ ಇಲ್ಲೆಂತಾ ಎಲ್ಲರ ಬಾಯಿಲಿ ಮಾತ್. ಸಣ್ಣ ನುಕ್ಕುಳುಗ ನಮ್ಮ ಮಣ್ಣ್‌ನ ಸಡ್ಲ ಮಾಡಿ ಬೇರ್ ಇಳಿಸಿಕೆ ಸಹಾಯ ಮಾಡ್ತಿದ್ದೊ ಗಡ. ಸಣ್ಣ ಹುಳದ ದೊಡ್ಡ ಕೆಲ್ಸ ನಮಗೆ ಗೊತ್ತೇ ಆತ್ಲೆ. ಈಗ ನಮ್ಮದ್ ಒಂದೇ ಹಾಡ್. ಈಗಿನ ತರಕಾರಿಗೆ ರುಚಿ ಇಲ್ಲೆ. ಗಣ್ಣ್ ಲಾಯಿಕಾ ಆದೇಲೆ. ಅಣ್ಣು ಸಿಕ್ಕುದೇ ಅಪರೂಪ ಆವುಟು. ಭೂಮಿನ ನುಕ್ಕುಳಿಗೆ ನಾವೇ ಏಸ ಕೊಟ್ಟು ಸಾಯ್ಸಿದೋ ಅಂತ ನಮ್ಮ ಮನ್ಸಿಗೆ ಯಾಕೇ ಬಾದುಲೆನೋ ಗೊತ್ತ್ಲೆ. ನಮ್ಮ ಪ್ರಕೃತ್ತಿಲಿ ಇರುವ ಒಂದು ಸಣ್ಣ ಕ್ರಿಮಿ ಕೂಡ ನಮ್ಮ ಬೊದ್ಕಿಗೆ ಎಷ್ಟು ಮುಖ್ಯ ಅನ್ನುವಂತದ್ದು ನಮಗೆ ಈಗ ಗೊತ್ತಾದೆ.

ಅಂದು ಕರ್ಚಿಲ್ಲದೆ ಕಳ್ದ ನಮ್ಮ ಬೊದ್ಕಿನ ಹಿಂದೆ ಸಣ್ಣ ಸಣ್ಣ ನುಕ್ಕುಳುಗ ಕೂಡ ಕೆಲ್ಸ ಮಾಡ್ತ ಇದ್ದಲೋ ಅಂತ ನೆನ್ಸಿಕನ. ಗಾಳಕ್ಕೆ ಸಿಕ್ಕಿದ ನುಕ್ಕುಳು. ಗಣ್ಣ್ ಎಳ್ಳಿಕನ ಸತ್ತೋದ ನುಕ್ಕುಳು ಎಲ್ಲಾ ಮನ್ಸೊಳೊಗೆ ಬಂದ್ ಯಾಕೋ ಎದೆಕಟ್ಟಿದೆ. ಕಣ್ಣ್‌ಲಿ ಪಸೆ ಅಂಜಿದೆ. ನಮ್ಮ ಮಣ್ಣ್‌ಲಿ ಮತ್ತೆ ನುಕ್ಕುಳುಗ ಹುಟ್ಟಕಣಾಕು ಅನ್ನುವಂತದ್ದು ನಮ್ಮೊಳಗಿನ ದೊಡ್ಡ ಆಸೆ. ಅವರವರ ಪ್ರಪಂಚಕ್ಕೆ ಹೊಕ್ಕಿ ಅನಗತ್ಯ ಹಾಳ್ ಮಾಡುವ ಅದಿಕಾರ ನಾವ್ಯಾರಿಗೂ ಇಲ್ಲೆ.

**ಸ್ಮಿತಾ ಅಮೃತರಾಜ್**. ಸಂಪಾಜೆ

## ಮಕ್ಕಳ ನೀತಿ ಕತೆ

# ಗುರುಲಿ ನಂಬಿಕೆ

ಲಾಯ್ಕಲಿ ಬದ್ಕೋಕಂತಾರೆ ನಾವ್ಗೆ ನಂಬಿಕೆ ತೇಳುವಂತದ್ ಬಾರಿ ಮೂಲಭೂತವಾಗಿ ಬೇಕಾದ್. ಈ ನಂಬಿಕೆ ಯಾರಿಗೆ, ಯಾವ್ದರ್ಲಿ, ಯಾರಮೇಲೆ, ಯಾಗ, ಹೇಂಗೆ ತೇಳುವಂತ ಸುಮಾರ್ ಪ್ರಶ್ನೆಗ ನಮ್ಮ ಮನ್ಸ್‌ಲಿ ಬಂದೇ ಬಂದದೆ ಅಲಾ? ಹೌದು. ಈ ಪ್ರಶ್ನೆಗಳಿಗೆ ಉತ್ತರ ಬಾರಿ ಸುಲಭ. ನಾವು ನಂಬಿರೆ, ನಂಬಿದರ ಪೂರ ನಂಬೊಕು. ಅದ್ಕೆ ಎಷ್ಟ್, ಯಾಗ, ಹೇಂಗೆ ತೇಳುವ ಪ್ರಶ್ನೆನೇ ಬಾಕಿಲ್ಲೆ. ಹಾಂಗೆ ನಂಬಿರೆ ಮಾತ್ರ ನಾವ್ಗೆ ನಂಬಿಕೆಗೆ ತಕ್ಕ ಫಲ ಸಿಕ್ಕಿದೆ. ಅಲ್ಲಾರೆ ನಂಬಿದ ಕೆಲ್ಸನೇ ದಂಡ ಆಗ್ಯೋದೆ ಅಷ್ಟೆ.

ಒಬ್ಬ ಮನುಸಂಗೆ ಮುಂದೆಂದಳೇ ಗುರುಗ ತೇಳ್ರೆ ಹಚ್ಚ ಹಗ್ರ. 'ಗುರು ತೇಳ್ರೆ ಏನ್ ದೇವ್ರಾ? ಅಂವನೂ ನಮ್ಮಾಂಗೆ ಮನುಸನೇ ಅಲಾ? ಮತ್ತೆ ಯಾಕೆ ಗುರು ಹೇಳ್ದರ ಕಣ್ಣ್‌ಮುಚ್ಚಿ ನಂಬೊಕು?' ಇಂತದೇ ಸಾವ್ರ ಪ್ರಶ್ನೆಗ ಅಂವಂದ್. ಅಂವಂಗೊಬ್ಬ ಜೋಸ್ತಿ ಇತ್ತ್. ಆ ಜೋಸ್ತಿ ಯಾಗೋಳು ಗುರುಗಳ, ದೇವ್ರ ಎಲ್ಲ ಪೂರ್ಣಲಿ ನಂಬಂವ. 'ನಂಬಿಕೆ ತೇಳ್ರೆ ಹೇಂಗಿರೊಕು, ಅದರ್ಂದ ಏನ್ ಪ್ರೋಜನ ಆದೆ ತೇಳಿ ನನ್ನ ಜೋಸ್ತಿಗೆ ಗೊತ್ತಾವಂಗೆ ಮಾಡೊಕು' ತೇಳಿಕಂಡ್ ಒಂದು ಕೆಣಿ ಮಾಡ್ತ್.

ಆ ಊರ್‌ಲಿ ಒಬ್ಬ ಸಿದ್ಧ ಗುರುಗ ಇದ್ದೊ. ಅವರಕ್ಕಲೆ ಬಾರಿ ಬಾರಿ ಶಕ್ತಿಗ ಇದ್ದೊ. ಅವು ಎಲ್ಲೆಲ್ಲೋ ಎಷ್ಟೆಷ್ಟೋ ಕಾಲದವರೆಗೆ ತಪಸ್ಸ್ ಮಾಡಿ ಸಿದ್ಧ ಶಕ್ತಿಗಳ ಪಡ್ಕಂಡ್ ಬಂದ್ ಅಲ್ಲಿ ಆಶ್ರಮ ಕಟ್ಟಿಕಂಡ್ ಇದ್ದೊ. ಅವರ ನಂಬಿ ಹೋದೊವ್ಕೆಲ್ಲ ಒಳ್ಳೆದ್ ಮಾಡ್ತಿದ್ದೊ. ಅಲ್ಲಿಗೆ ಈ ಮೊಂಡ ಜೋಸ್ತಿನ ಕರ್ಕಂಡ್ ಹೋಗಿ ಗುರುಗಳೊಟ್ಟಿಗೆ ಮೆಲ್ಲ ಇಂವನ ಕತೆಗಳೆಲ್ಲ



ಹೇಳ್ತ್. 'ಗುರುಗಳೆ.  ಇಂವಂಗೆ ನಂಬಿಕೆ ತೇಳ್ದು ಹೇಂಗಿರೊಕು ತೇಳ್ದೊರ ತಿಳ್ಸಿ ಹೇಳೊಕೊಳೆ. ಇಂವ ಈಗ ನಿಮ್ಮಂತ ಗುರುಗಳ್ನೂ ನಂಬಿಕೆ ಒಪ್ಪುದುಲೆ' ತೇಳ್ತ್. 'ಅದು ಹಂಗಾರೆ' ತೇಳಿ ಒಪ್ಪಿಕಂಡ ಗುರುಗ ಆ ಜೋಸ್ತಿ ಹೈದಂಗೆ ಒಂದು ಸಣ್ಣ ಕಾಗದದ ತುಂಡುನ ನಾಕ್ ಮೊಡ್ಚಿ ಕೊಟ್ಟ್ ಹೇಳ್ದೊ 'ನೋಡಣ ಈ ಕಾಗದಲಿ ಒಂದು ಮಂತ್ರನ ಬರ್ದೊಳೆ. ಇದರ ಜೋಬಿಲಿ ಇಸಿಕಂಡ್ ನೀ ನೀರ್‌ನ ಮೇಲೆ ಬೇಕಾರ್ ನಡ್ಕಂಡ್ ಹೋಕ್. ಆದರೆ ಒಂದು ಶರ್ತ ಉಟ್ಟು. ಎಂತದೇ ಆದರುನೂ ನೀ ಇದರ ನಡೂಲಿ ತೆಗ್ದ್ ನೋಡಿಕೆ ಬೊತ್ತು. ಗೊತ್ತಾತಲೆ' ಅಂತ.

ಅತ್ರಮಂದ ಬೇಗ ಬೇಗ ವಪಾಸ್ ಹೊರ್ಟ್ ಬಂದ ಆ ಜೋಸ್ತಿ ಹೈದ ದಾರಿ ಕರೆಲಿ ಅಗಾಲಲಿ ಹಂರ್ಡಿದಾಂಗೆ ಇದ್ದ ಪಯಸ್ವಿನಿ ಹಳ್ಳನ ನೋಡ್ತ್. ಮನಸ್ಸೊಳಾಗೆ ಗ್ರೈಸಿಕಂತ್ 'ನೋಡ ಈ ಗುರು ಕೊಟ್ಟ ಮಂತ್ರದ ಕಾಗದನ ಶಕ್ತಿನ ಪರೀಕ್ಷೆ ಮಾಡೊಮು. ಈ ಕಾಗದ ತುಂಡುನ ಜೋಬಿಲಿ ಇಸಿಕಂಡ್ ನಾ ಈ ಹಳ್ಳನ ದಾಟಿಯೇ ಬುಟ್ಟನೆ. ಮುಳ್ಗದೆ ನಾ ನೀರ್‌ಲಿ ತೇಲ್ರೆ ಈ ಗುರುನ ನಂಬಿನೆ. ನೋಡ' ಅಂತ. ಹಳ್ಳದ ಕರೆಲಿ ನಿತ್ತ್, ಕಣ್ಣ್ ಮುಚ್ಚಿ ಮೆಲ್ಲ ಒಂದು ಹೆಜ್ಜೆ ನೀರ್‌ಗೆ ಹಾಕಿತ್. ಆಶ್ಚರ್ಯ ಆಗೋತ್ ಅಂವಂಗೆ! ಕಾಲ್‌ನ ನೆಲದ ಮೇಲೆನೇ ಇಸಿದಾಂಗೆ ಆಗ್ತಾ ಉಟ್ಟು. ಹಂಗೆ ಮತ್ತೊಂದು ಕಾಲ್ ಇಸಿತ್. ಮೆಲ್ಲ ಮೆಲ್ಲ ನಡ್ತ್, ಹೌದು, ಅಂವ ಈಗ ನೀರ್‌ನ ಮೇಲೆ ನಡಿತಾನೆ ಉಟ್ಟು. ನಡ್ದ್ ನಡ್ದ್, ಹಳ್ಳದ ನಡೂಗೆ ಎತ್ತಿತ್. ಮೆಲ್ಲ ಕಣ್ಣ್ ಬುಟ್ಟ್ ನೋಡ್ತ್. ಸತ್ಯಕ್ಕಾರೆ ಅಂವ ನಡು ಹಳ್ಳಲಿ ನೀರ್‌ನ ಮೇಲೆನೇ ನಿತ್ತ್‌ಕಂಡುಟ್ಟು. ಅಂವಂಗೆ ಈಗ ಗುರುನ ಶಕ್ತಿಲಿ ನಂಬಿಕೆ ಬಾತ್. 'ಎಪ್ಪಾ ಗುರುಗಳೆ ನಿಮ್ಮ ಶಕ್ತಿ ಬಾರಿ ಉಟ್ಟು. ನಾ ನಿಮ್ಮ ನಂಬಿನೆ' ತೇಳಿ ಗ್ರೈಸಿಕಂಡಾಕನ ಅಂವಂಗೆ ಒಂದು ಕುರೆ ಬುದ್ಧಿ ಬಾತ್. 'ಈ ಚೀಟ್‌ಲಿ ಎಂತ ಬರ್ದೊಳೊ ಈ ಗುರುಗ. . . . ಒಮ್ಮೆ ಓದಿಬುಟ್ಟನೆ' ತೇಳಿ ಮೆಲ್ಲ ಚೀಟ್‌ನ ಬಿಚ್ಚಿತ್. ಅಂವ ಹಂಞ ಹೊತ್ತುಂದ ಮುಂದೆ ನೀರ್‌ಲಿ ಕಾಲ್ ಇಸಿ ತೇಲಿಕನ ಆದಂರ್ದಳೊ ಹೆಚ್ಚಿಗೆ ಆಶ್ಚರ್ಯ ಆತ್ ಈಗ ಅಂವಂಗೆ. ಚೀಟ್‌ಲಿ ಎಂತದೂ ಬರ್ದಿತ್ಲೆ! ಪೂರ ಕಾಲಿ ಕಾಲಿ. ಆಗ ಅಂವಂಗಾತ್ 'ಗುರು ನಂಗೆ ಡೋಂಗಿ ಮಾಡ್ತ್. ಇದರ್ಲಿ ಎಂತ ಪೊಡ್ಮಳುನೂ ಬರ್ತ್ಲೆ. ನನ್ನ ಮಂಗ ಮಾಡ್ತ್'. ಹಂಗೆಲ್ಲ ಗ್ರೈಸಿಕಂಡ್ ಇರಕಾಕನೆ ಅಂವ ಸುಂಯ್ಯಂತ ಮುಳ್ಗಿಕೆ ಸುರಾತ್. ಮುಳ್ಗಿ ಸತ್ತೇ ಹೋತ್.

ವಿಸಯ ಇಷ್ಟೆ. ನಾವು ಎಂತರ್ನೇ ಆಗಲಿ ನಂಬಿರೆ ಪೂರ ನಂಬೊಕು, ಅಲ್ಲಾರೆ ಬುಟ್ಟೇ ಬುಡೊಕು. ಹಂಗ್ಯಾಕನ ನಾವ್ಗೆ ಬೊದ್‌ಕ್‌ಲಿ ಕುಸಿ ಸಿಕ್ಕಿದೆ.

**✍ ಸೀತಾರಾಮ ಕೇವಳ**
**ಪ್ರಾಂಶುಪಾಲರು, ವಿದ್ಯಾರಶ್ಮಿ ವಿದ್ಯಾಲಯ**
**ಸವಣೂರು, ಕಡಬ, ದ.ಕ.**
**ಮೊ. : 9448725813**

ಬನ್ನಿ ಓದೋಮೊ

# "ಸ್ವಾಮಿ ಮತ್ತು ಅವನ ಸ್ನೇಹಿತರು"
# ಕಾದಂಬರಿನ ಒಂದು ಕಂಡಿಕೆ

*'ದೇಶ ಸುತ್ತಿ ನೋಡು, ಕೋಶ ಓದಿ ನೋಡು' ಅಂತೇಳುವ ಗಾದೆನಂಗೆ ದೇಶ ಸುತ್ತಿರೆ ದೇಶದ ಪರಿಚಯ ಆದೆ ಮತ್ತೆ ಕೋಶ ಓದಿರೆ ಜ್ಞಾನ ಜಾಸ್ತಿ ಆದೆ. ಆದರೆ ಇಂದ್‌ನ ಕಾಲಘಟ್ಟಲಿ ತಂತ್ರಜ್ಞಾನ ಬೆಳ್‌ದಂಗೆ ಓದುವ ಅಭ್ಯಾಸ ಕಡಿಮೆ ಆಗುಟ್ಟು. ಹಾಂಗಾಗಿ ನಾವು ನಮ್ಮ ಹಿಂಗಾರ ತ್ರೈಮಾಸಿಕಲಿ ಬನ್ನಿ ಓದೋಮೊ ಅಂತೇಳುವ ಅಂಕಣಲಿ ಸ್ವಾಮಿ ಮತ್ತು ಅವನ ಸ್ನೇಹಿತರು ಅಂತೇಳುವ ಕಾದಂಬರಿನ ಒಂದು ಕಂಡಿಕೆನ ಹಾಕ್ಯೊಳೊ. ಇದ್ ಹೆಚ್.ವೈ. ಶಾರದಾ ಪ್ರಸಾದ್‌ರ "ಸ್ವಾಮಿ ಮತ್ತು ಅವನ ಸ್ನೇಹಿತರು" ಎಂಬದು ಆರ್.ಕೆ. ನಾರಾಯಣ್‌ರವರ "ಸ್ವಾಮಿ ಎಂಡ್ ಫ್ರೆಂಡ್ಸ್" ಕಾದಂಬರಿನ ಕನ್ನಡ ಅನುವಾದ. ಈ ಸರ್ತಿನ ಸಂಚಿಕೆಲಿ ಬನ್ನಿ ಓದೋಮೊ ಅಂತ ಹೇಳುವ ಅಂಕಣಲಿ ನಿಮ್ಮ ಮುಂದೆ ಇಡ್ತೊಳೊ.*

"ಇದಾಗಿ ಅರ್ಧ ಗಂಟೆ ಕಳೆದಿದೆ. ತಂದೆಯ ಕೋಣೆಯಲ್ಲಿ ಒಂದು ಕುರ್ಚಿಯ ಮೇಲೆ ಕುಳಿತು ಕೈಯಲ್ಲಿ ಸ್ಲೇಟು, ಬಳಪಗಳನ್ನು ಹಿಡಿದು ಸಿದ್ಧನಾಗಿದ್ದಾನೆ ಸ್ವಾಮಿ. ಅಪ್ಪ ಗಣಿತದ ಪುಸ್ತಕವನ್ನು ತೆರೆದಿಟ್ಟುಕೊಂಡು ಲೆಕ್ಕವನ್ನು ಓದಿ ಹೇಳುತ್ತಿದ್ದಾರೆ. ಸ್ವಾಮಿ ಬರೆದುಕೊಳ್ಳುತ್ತಿದ್ದಾನೆ. ರಾಮನ ಹತ್ತಿರ ಹತ್ತು ಮಾವಿನ ಹಣ್ಣುಗಳಿವೆ. ಅವನ್ನು ಮಾರಿ 15 ಆಣೆಗಳನ್ನು ಸಂಪಾದಿಸಬೇಕೆಂದು ಅವನು ಅಪೇಕ್ಷಿಸುತ್ತಾನೆ. ಕೃಷ್ಣನಿಗೆ ನಾಲ್ಕೇ ಮಾವಿನ ಹಣ್ಣುಗಳು ಸಾಕು. ಹಾಗಾದರೆ ಕೃಷ್ಣನು ಎಷ್ಟು ಕೊಡಬೇಕಾಗುತ್ತದೆ?

ಮಾವಿನ ಹಣ್ಣುಗಳ ಹೆಸರು ಕೇಳಿ ಅವನ ಬಾಯಿಯಲ್ಲಿ ನೀರೂರಿತು. 10 ಮಾವಿನ ಹಣ್ಣುಗಳ ಬೆಲೆ ಹದಿನೈದೇ ಆಣೆಗಳೆಂದು ರಾಮನು ಏಕೆ ನಿಗಧಿ ಮಾಡಿದ ಎಂಬುದು ಅವನಿಗೆ ತೋರದೆ ಹೋಯಿತು. ರಾಮ ಎಂಥವನಿದ್ದಿರಬೇಕು? ಸುಮಾರು ಶಂಕರನ ಹಾಗಿದ್ದಿರಬಹುದು. ಆ ಹತ್ತು ಮಾವಿನ ಹಣ್ಣುಗಳು, ಅದನ್ನು ಹದಿನೈದೇ ಆಣೆಗಳಿಗೆ ಮಾರಬೇಕೆಂಬ ದೃಢತೆ, ಅವನ ಲೆಕ್ಕಾಚಾರ– ಇವನ್ನೆಲ್ಲ ಯೋಚಿಸಿದರೆ ಅವನು ಶಂಕರನ ಹಾಗೆ ಇದ್ದೇ ತೀರಬೇಕು. ರಾಮ ಶಂಕರನ ಹಾಗಿದ್ದರೆ ಕೃಷ್ಣ ಬಟಾಣಿಯ ಹಾಗಿದ್ದಿರಬೇಕು. ಇದ್ದಕ್ಕಿದ್ದಂತೆ ಕೃಷ್ಣನ ಬಗ್ಗೆ ಸ್ವಾಮಿಗೆ ಮರುಕವುಂಟಾಯಿತು. ಏಕೆ ಎಂಬುದೇ ಅವನಿಗೆ ತಿಳಿಯದು.

ಅಪ್ಪ ಪೇಪರ್ ಓದುತ್ತ ಇದ್ದವರು ಇಣಿಕಿ ನೋಡಿ. "ಲೆಕ್ಕ ಮಾಡಿ ಮುಗಿತೇನೋ?" ಎಂದರು.

"ಅಪ್ಪ, ಆ ಮಾವಿನ ಹಣ್ಣುಗಳು ಚೆನ್ನಾಗಿ ಮಾಗಿದ್ದುವೇನಪ್ಪ?"

ಅಪ್ಪ ಕಷ್ಟಪಟ್ಟು ನಗುವನ್ನು ತಡೆದುಕೊಂಡು, "ಮೊದಲು ಲೆಕ್ಕ ಮಾಡು. ಹಣ್ಣು ಕಳಿತಿತ್ತೋ, ಕಾಯಿಮೇಲಿತ್ತೋ ಆಮೇಲೆ ಹೇಳ್ತೀನಿ."

ಸ್ವಾಮಿನಾಥನಿಗೆ ದಿಕ್ಕು ತೋಚಲಿಲ್ಲ. ರಾಮನು ಹಣ್ಣು ಮಾರುತ್ತಿದ್ದನೋ, ಕಾಯಿ ಮಾರುತ್ತಿದ್ದನೋ ಎನ್ನುವುದನ್ನು ಅಪ್ಪ ಈಗಲೆ ಹೇಳಿದ್ದರೆ! ಆಮೇಲೆ ಹೇಳಿ ಏನು ಪ್ರಯೋಜನ? ಆ ಪ್ರಶ್ನೆಯ ಜವಾಬಿನ ಮೇಲೆ ಇಡೀ ಲೆಕ್ಕದ ಉತ್ತರ ನಿಂತಿದೆ ಎಂದು ಅವನಿಗೆ ತೋರಿತು. ಕಳಿತಿಲ್ಲದ ಹತ್ತು ಮಾವಿನ ಹಣ್ಣುಗಳಿಗೆ ರಾಮನು ಹದಿನೈದಾಣೆ ವಸೂಲು ಮಾಡುವುದು ತೀರ ಅನ್ಯಾಯವಲ್ಲವೆ? ಒಂದು ಪಕ್ಷ ಹಾಗೆ ಮಾಡಿದರೂ ಮಾಡಬಹುದು– ರಾಮನ ಗುಣವೇ ಹಾಗಲ್ಲವೇ? ಆ ರಾಮನ ಕಂಡರೆ ಸ್ವಾಮಿನಾಥನಿಗೆ ತುಂಬ ದ್ವೇಷ ಬಂದು ಹೋಯಿತು. ದುಷ್ಟ ಗುಣಗಳೆಲ್ಲ ರಾಮನಲ್ಲಿ ಮನೆಮಾಡಿರಬೇಕೆಂದು ಸ್ವಾಮಿನಾಥ ತೀರ್ಮಾನಿಸಿಬಿಟ್ಟಿದ್ದ.

"ಅಪ್ಪ, ನನ್ನ ಕೈಲಿ ಈ ಲೆಕ್ಕ ಮಾಡೋಕೆ ಆಗೋದಿಲ್ಲ" ಎಂದು ಸ್ಲೇಟನ್ನು ಕೆಳಗಿಟ್ಟುಬಿಟ್ಟ.

"ಏನೋ ಪೀಗಂತಿ? ಏನಾಗಿದೆಯೋ ನಿನಗೆ ಧಾಡಿ? ತ್ರೈರಾಶಿಯಲ್ಲಿ ಸಾಧಾರಣವಾದ ಲೆಕ್ಕ ಮಾಡೋಕೆ ಬರೋಲ್ವೆ?"

"ನಮ್ಮ ಸ್ಕೂಲಿನಲ್ಲಿ ಅದೆಲ್ಲ ಹೇಳಿಕೊಟ್ಟಿಲ್ಲ, ಅಪ್ಪ."

"ಆ ಸ್ಲೇಟು ತಾ ಇಲ್ಲಿ. ನಿನ್ನ ಕೈಯಲ್ಲೇ ಉತ್ತರ ಹೇಳಿಸ್ತೀನಿ" ಎಂದರು ಅಪ್ಪ. ಈ ಅದ್ಭುತ ಹೇಗಾದೀತೋ ಎಂದು ಸ್ವಾಮಿ ಕುತೂಹಲದಿಂದ ಕಾದು ನೋಡುತ್ತಿದ್ದ. ಅಪ್ಪ ಒಂದು ಕ್ಷಣ ಲೆಕ್ಕದ ಕಡೆ ನೋಡಿ, "ಹತ್ತು ಮಾವಿನ ಹಣ್ಣಿನ ಬೆಲೆಯೇನು?" ಎಂದು ಪ್ರಶ್ನಿಸಿದರು.

ಲೆಕ್ಕದ ಯಾವ ಭಾಗದಲ್ಲಿ ಈ ಪ್ರಶ್ನೆಗೆ ಉತ್ತರವಿದೆಯೆಂಬುದನ್ನು ಸ್ವಾಮಿ ಹುಡುಕಿ ಹುಡುಕಿ ನೋಡಿ, "ಗೊತ್ತಿಲ್ಲಾಪ್ಪ" ಎಂದ.

"ಅಬ್ಬ, ನಿನ್ನಂಥಾ ದಡ್ಡನ್ನ ನಾನು ಇದುತನಕ ನೋಡಿಲ್ಲ ಕಣೋ. ಎಲ್ಲಿ, ಲೆಕ್ಕ ಓದು. ಹತ್ತು ಮಾವಿನ ಹಣ್ಣನ್ನು ಮಾರಿದರೆ ರಾಮನಿಗೆ ಎಷ್ಟು ದುಡ್ಡು ಬರಬೇಕು?"

ಹದಿನೈದಾಣೆ ಎಂದು ಸ್ವಾಮಿಗೇನೋ ಗೊತ್ತು. ಆದರೆ ಹತ್ತು ಹಣ್ಣುಗಳಿಗೆ ಅಷ್ಟು ಬೆಲೆ ಸರಿಯೆ? ದುರಾಶೆಯಿಂದ ರಾಮ ಅಷ್ಟು ಬೇಕೆಂದು ಅಪೇಕ್ಷಿಸಬಹುದು. ಆದರೆ ಅದು ಸರಿಯಾದ ಬೆಲೆಯೆ? ಇಷ್ಟರ ಮೇಲೆ ಇನ್ನೂ ಒಂದು ಮುಖ್ಯವಾದ ಪ್ರಶ್ನೆ ಇದೆ. ಆ ಹಣ್ಣುಗಳು ಕಳಿತಿದ್ದವೋ ಇಲ್ಲವೋ– ಎಂಬುದು. ಅವು ಚೆನ್ನಾಗಿ ಹಣ್ಣಾಗಿದ್ದರೇನೋ ಹದಿನೈದಾಣೆ ಕೊಡಬಹುದು. ದುಬಾರಿಯಲ್ಲ...... ಇದನ್ನೆಲ್ಲ ಬಿಚ್ಚಿ ಹೇಳಿದರೆ ಅಪ್ಪನ ಗಂಟೇನು ಹೋಗುತ್ತೆ?

ಹರಟೆ & ಹಾಸ್ಯ

# ಪಟ್ಟೆ ಹುಲಿನೂ ಚಿಪ್ಪು ಹಂದಿನೂ

ಹಿಂಬೊತ್ತಾಕನ ಮಕ್ಕ ಎಲ್ಲ ಅಜ್ಜನ ಸುತ್ತ ಸೇರ್‍ದೊ."ತಾತಾ ಕತೇ..ತ" ಕೋರಲಿ ಕರ್ದ್ ಹೇಳಿ ಅಜ್ಜಂಗೆ ಕತೆ ಹೇಳುವ ಜವಾಬ್‌ದಾರಿನ ನೆನ್ಪು ಮಾಡ್ದೊ.

ಪರೀಕ್ಷೆಗ ಎಲ್ಲ ಮುಗ್ದು ಅರ್ಪ್ರಿಲ್‌ನ ರಜೆ ಸಿಕ್ಕಿತ್ತ್. ಅಮೃತಾ. ಅಲಕಾ. ಅಭಿಷೇಕ ಬೆಂಗ್ಳೂರುಂದ ಅಜ್ಜನ ಮನೆಗೆ ಬಂದಿದ್ದೊ. ಅವರ ಅಪ್ಪ ರಾಮಕೃಷ್ಣನೇ ಮಕ್ಕಳ ಕರ್ಕಂಡ್ ಬಂದ್ ಮನೆಲಿ ಬುಟ್ಟು ಹೋಗಿತ್ತ್. ಅಮ್ಮ ಭಾರತಿ ಬಂದಿತ್ತಲೆ. ಅವರ ಬ್ಯಾಂಕ್‌ಗೂ. ರಾಮಕೃಷ್ಣನ ಆಫೀಸ್‌ಗೂ ಶಾಲೆನ ಹಾಂಗೆ ರಜೆ ಇಲ್ಲಲೆ.

ರಜೆ ದಿನಗಳ್ಲಿ ಮಕ್ಕ ತಪ್ಪದೆ ಅಜ್ಜನ ಮನೆಗೆ ಬಂದವೆ. ಅಜ್ಜಿ ಮಾಡಿಕೊಡುವ ನಮುನಿ ನಮುನಿನ ತಿಂಡಿ ತಿಂದ್ಕಂಡ್ , ಅಜ್ಜ ಹೇಳುವ ರೋಚಕ ಕತೆಗಳ್‌ನೋ .ಅನುಭವಗಳ್ನೋ ಕೇಳಿವೆ. ಪ್ರವೀಣ ಸಣಪನೊಟ್ಟಿಗೆ ಕಾಡ್ ಮೇಡ್ ಅಲ್ದವೆ. ಹಳ್ಳಲಿ ಮೀಸಿವೆ. ಊರುಲಿ ನಡಿವ ಮದುವೆ. ಜಾತ್ರೆಗಳಿಗೆ ಹೋದವೆ. ಯಕ್ಷಗಾನ ಬಯಲಾಟನ ಇರ್‌ಲೆಲ್ಲಾ ನಿದ್ದೆಗೆಟ್ಟ್ ನೋಡಿವೆ. ಇಡೀ ಹಗ್‌ಲ್ ನಿಲ್ಗಿ ಹಿಂಬೊತ್ತ್ ಎದ್ದ್ "ಬೊಳ್ದಾತಾ.. .. "ತ ಕೇಳಿ ಮನೆವು ಎಲ್ಲ ನೆಗಾಡುವಾಂಗೆ ಮಾಡಿವೆ. ಪೇಟೆನ ಕಟ್ಟಿ ಹಾಕಿದಾಂಗೆ ಇರುವ ಜೀವನಂದಳೂ ಬೇರೆ ಆದ ಸ್ವತಂತ್ರ , ಸ್ವಚ್ಛಂದ ಜೀವನ ಉಟ್ಟು ತೇಳ್ದರ ಕಂಡ್‌ಕಂಡವೆ. ಇವರೊಟ್ಟಿಗೆ ರಾಮಕೃಷ್ಣನ ತಂಗೆ ರಮ್ಯನ ಮಕ್ಕ ಪ್ರಸಾದ. ಕೀರ್ತಿ ಬಂದ್ ಸೇರಿಕಂಡವೆ. ಸಂತೋಷ ಮುಗಿಲ್ ಮುಟ್ಟದೆ. ಪ್ರವೀಣ ಸಣಪ ಮತ್ತ್ ಶಕುಂತಲ ಚಿಕ್ಕಮ್ಮನ ಎಳ್ತ್ ಬೊಮ್ಮಟೆ ಈ ಸರ್ತಿನ ವಿಶೇಷ ಆಕರ್ಷಣೆ ಮಕ್ಕಳಿಗೆ. ಆದರೆ ಈ ಸರ್ತಿ ಬೇಗ ಬೇಗ ಪರೀಕ್ಷೆ ಮುಗ್‌ಸಿ ಹತ್ತ್ ದಿನ ಮುಂದೆ ನೇರಜೆ ಕೊಟ್ಟ್ ಬುಟ್ಟಿದ್ದೊ. ಕೊರೋನ ವೈರಾಣು ಕಾಯಿಲೆ ಹರ್ಡಿಕಂಡ್ ಉಟ್ಟುತೇಳಿ ಏನೇನ್ ಜಾಕುರ್ತೆ ಮಾಡೊಕುತ ಹೇಳಿ ಕಳ್ಸಿದ್ದೊ. ಮಕ್ಕ ಮನೆಗೆ ಬಂದೊವೇ ಸುರೂಗೆ ಹೇಳ್ದ " ಹುಕ್ಕಪ , ನೀವು ಕೆಮ್ಮುಕನ ಸೀನ್‌ಕನ ಜ್ಯರಾಸ್‌ನ ಬಾಯಿಗೆ ಅಡ್ಡ ಹಿಡಕಣೊಕು ತ. ಅಜ್ಜಂಗೆ ನೆಗೆ ಬಾತ್. ಮಕ್ಕ ಸಾಲೆಲಿ ಏನ್ ಕಲ್ತರೂ ಸುರುಗೆ ಪ್ರಯೋಗ ಮಾಡ್ದು ಮನೆಲಿ. ಅವ್‌ಕೆ ಹಿಂದನ ಒಂದು ಸಂಗ್‌ತಿ ನೆನ್ಪು ಆತ್. ದೊಡ್ಡ ಮಜ್ಜ ರಾಮಕೃಷ್ಣ ಆಗ ಮೂರ್‌ನ್ಸ್ಯೋ ನಾಲ್ಕ್‌ನ್ಸ್ಯೋ ಕ್ಲಾಸ್‌ಲಿ ಓದ್‌ತಿತ್ತ್. ಒಂದು ದಿನ ಸಾಲೆಂದ ಬಂದವನೇ "ಅಪ್ಪ ಅಪ್ಪ ನೀ ಎಲ್ಲಿಯಾರ್ ಬೀಡಿ ಉರ್ಗಿ ಬುಡ್ಡಡ. ಅದಂರ್ದ ಕಾಯ್ಲೆ ಬಂದದೆ" ತ ಹೇಳ್ತ್. ಬೀಡಿ ಎಳಿದು ತೇಳ್ದರ ಬದ್‌ಲ್‌ಗೆ ಉರ್ಗುದುತ ಹೇಳಿತ್ತ್. ಬೀಡಿ ಕೊಡಿಲಿ ಕಿಚ್ಚಿಕಂಡದೆ ಅಲ್ಲ. ಉರ್ಗಿರೆ ಮಾತರ ಕಿಚ್ಚಿ ಹೊತ್ತುದುತ ಅವನ ಅಂದಾಜಿ. ಮಕ್ಕ ಕಲ್ತ ಹೊಸ ಸಂಗ್ತಿಗ ಅವ್ಕೆ ಮಾತರ ಹೊಸ್ತು. ದೊಡ್ಡವ್ರಕೆ ಅಲ್ಲಲೆ. ಅದೊರೂ ಮಕ್ಕಳ ಮಾತ್‌ಗೆ ಬೆಲೆ ಕೊಡೊಕು. ಇಲ್ಲದ್ದರೆ ಅವ್ರುಕೆ ಕಲಿವ ಹೇಳುವ ಉಮೇದ್ ಇರ್ದುಲೆ. ಬೀಡಿ ಎಳಿವ ಅಭ್ಯಾಸ ಇಲ್ಲದ್ದರೂ ಮಜ್ಜ ಹೇಳ್ದರ

ಒಪ್ಪಿಕಂಡಿದ್ವೊ. ಈಗ ಪಿಕ್ನಿಕ ಹೇಳ್ಕನೂ "ನೋಡಿ ಮಕ್ಕಳೇ, ನನ್ನ ಹೆಗ್‌ಲ್‌ಲಿ ಒಂದ್ ಸಾಲ್ ಯಾಗೋಳು ಇದ್ದದೆ. ಜೆರೀ ಕೊರೋನ ಹಜ್ಜಿದೆತ ಅಲ್ಲ. ಇಲ್ಲಿರೂ ಕಮ್ಮುಕನ ಸೀನ್‌ಕನ ಬಾಯಿಗೆ ಬಟ್ಟೆ ಅಡ್ಡ ಹಿಡಿದು ಒಳ್ಳೆ ಅಭ್ಯಾಸ." ಮಕ್ಕಳಿಗೆ ಕುಸಿ ಆತ್.

ಹಗ್‌ಲೆಲ್ಲ ಪೇರ್ಲೆ ಕಾಯಿ, ನೆಲ್ಲಿ ಕಾಯಿ, ಮಾಯ್ನಣ್ಣ್, ಗೇರ್ದಣ್ಣ್ ಕೊಯ್ದಲ್ಲಿ ತಿಂಬವರ್ಲಿ ಮಕ್ಕ ಕಾಲ ಕಳ್ದವೆ. ಅಷ್ಟ್ ಮಾತರ ಅಲ್ಲ, ಪ್ರವೀಣ ಸಣಾಪನೊಟ್ಟಿಗೆ ಗೇರ್ದ ಕೊಜ್ಜಿಂದ ಬೀಜ ಹೆರ್ಕುದು, ದನದ ಕರ್‌ಗಳಿಗೆ ತೋಟಂದ ಗದ್ದೆ ಪುಣಿಂದ ಹುಲ್ಲು ಹೆರ್ದುತಾದು, ಉಂಬಕೆ ತೋಟಂದ ಕೊಡಿ ಬಾಳೆ ತಾದು, ಹೂವಿನ ದೈಗಳಿಗೆ ನೀರ್ ಹೊಯ್ದು, ಹಿಂಪೊತ್ತಾಕನ ಮಲ್ಲಿಗೆ ಬೊಳ್ಳಿಂದ ಮುಗ್ಗುಗಳ ಬುಡ್ಡಿ ಅಜ್ಜಿಗೆ ಕೊಡ್ದು–ಹೀಂಗೆ ಅವ್ಕೆ ಅವ್ಕೆ ಇಷ್ಟ ಆದ ಕೆಲ್ಸಗಳ್ಲಿ ಸಾಯ ಮಾಡ್ತಿದ್ದೊ.

ಅಜ್ಜನ ಅಧ್ಯಕ್ಷತೆಲಿ ನಡಿವ ಹಿಂಪೊತ್ತುನಅಧಿವೇಶನ ಜಾರೀ ಲಾಯ್ಕಿದ್ದದೆ. ಸುರೂಗೆ ಅಜ್ಜ ಕೆಲೊವು ಶ್ಲೋಕಗಳ ಹಾಡಿವೆ. ಮಕ್ಕಳೂ ಒಟ್ಟಿಗೆ ಸೇರಿಕಂಡವೆ. ಮತ್ತೆ ಚೈತ್ರ–ವೈಶಾಖ, ಪೊಗ್ಗು–ಜೇಷ ತಿಂಗಗ, ಪ್ರಭವ–ವಿಭವ ಸಂವತ್ಸರಗ, ಅಶ್ವಿನಿ–ಭರಣಿ ನಕ್ಷತ್ರಗ ಇದರೆಲ್ಲ ಹೇಳ್ದವೆ. ಮತ್ತೆ ಕತೆ. ಅಜ್ಜ ಅವರ ನೆನ್ಪಿನ ಬುತ್ತಿಂದ ಬಿಚ್ಚುವ ಅನ್ಸವ ಸಣ್ಣ ಮಕ್ಕಳಿಗೆ ಪಾಠನೂ ಹೌದು.

ಅಜ್ಜ ಗಂಟ್ಲ್ ಸರಿ ಮಾಡಿಕಂಡ್ ಸುರು ಮಾಡ್ದೊ.

"ಆಗ ಪರಂಗಿಯೊವು ನಮ್ಮ ದೇಶನ ಆಳ್ತಿದ್ದೊ......"

"ಎಂತ ಹುಕ್ಕಪ ಯಾಗ ಕತೆ ಸುರು ಮಾಡ್‌ಕನೂ ಪರಂಗಿಯೊವು ಆಳ್ಕನತ ಸುರು ಮಾಡ್ತ ಅಲ್ಲಾ....? "ಅಭಿಷೇಕ ಆಕ್ಷೇಪಣೆ ಮಾಡ್ತ್.

"ಹುಕ್ಕವ ಕತೆ ಹೇಳ್ಕನ ಒಂದೂರ್ಲ್ಲಿ......ತ ಸುರು ಮಡ್ತಾಂಗೆ ಅಲ್ಲ?" ಅಲಕ ಅಜ್ಜಿಗೂ ನ್ಯಾಯ ಒದ್ಗಿಸಿತ್.

"ಕತೆ ಸುರು ಮಾಡಿಕೆ ಮುಂದೇ ಮಾತಾಡಿಕೆ ಸುರು ಮಾಡ್ರೆಲ್ಲಾ? ಕತೆ ಕೇಳ್ಕನ ಹೂಂ ಹೂಂತ ಮಾತರ ಹೂಂಕಣೊಕು ಅಲ್ಲ ಹುಕ್ಕಪ?" ಅಮೃತಾ ಓರಿತನಂದ ದಬಾಯ್ಸಿತ್.

ಪ್ರಸಾದ, ಕೀರ್ತಿ ಸಣ್ಣೋವು. ಪಿಳಿ ಪಿಳಿ ನೋಡಿಕಂಡ್ ಕುದ್ದಿದ್ದೊ.

ಅಷ್ಟ್ ಹೊತ್ತಿಗೆ ಅಜ್ಜಿನೂ ಘಮ ಘಮ



ಪೊರಿಮಳ ಜೀರುವ ಮಲ್ಲಿಗೆ ಮುಗ್ಗುಗಳ ತಂದ್. ಜಾಳೆ ಬೊಕ್ಕಿಲಿ ನೇಯಕೆ ಕುದ್ದೊ.

ಅಜ್ಜ ಬೆಳ್ಳಿ ಮೀಸೆ ಅಡಿಲಿ ನೆಗಾಡಿ ಹೇಳ್ದೊ,

"ಅಭಿ ನೀವೆಲ್ಲ ಪುಣ್ಯವಂತರ್‌ಯಾ. ನಾವು ಹುಟ್ಟದೇ ಪರಂಗಿಗ ಈ ದೇಶಲಿ ಇರ್‌ಕನ. ಆಗಳೇ ಅವು ನಮ್ಮ ದೇಶದ ಆಡಳಿತನ ಅವರ ಕೈಗೆ ತಕಂಡ್ ಸೂರ್ಯೆಪತ್ತ್ ವೊರ್ಸ ಆಗಿತ್ತ್ ... ...ಯರ್ಲಿ, ಕತೆ ಕೇಳಿ... .."

"ಹೇಳಿ ಹುಕ್ಕಪಾ... ... " ಚಿಳ್ಳೆ ಪಿಳ್ಳೆಗ ಅರ್ಜೆಂಟ್ ಮಾಡ್ದೊ.

"ಇದ್ ಬಾರೀ ಹಿಂದೆ ನಡ್ದದ್. ಆಗ ಸೂರ್ಯ ಕಂತುವ ಹೊತ್ತು. ನಾ ತೋಟಲಿ ಕಲ್ಸ ಮುಗ್ಸಿ ಬಂದ್ ಆರಾಮಲಿ ಕುದ್ದಿದ್ದೆ. ಆಗ ಹಕ್ಕಲನ ಕಾಡ್‌ಂದ'ಹು ಹೂ' ತೇಳುವ ಆರ್ತನಾದ ಕೇಳಿಕೆ ಸುರುಆತ್. ಕೆಬಿ ಕೊಟ್ಟ್ ಆಲ್ಸಕನಅದ್ ಹುಲಿನ ಚೀತ್ಕಾರತ ಗೊತ್ತಾತ್. ಹುಲಿನ ನೆನ್ಪು ಬಂದದೇ ತಡುವ  ಹಟ್ಟಿಗೆ ಹೋಗಿ ನೋಡ್ದೆ. ಎಲ್ಲ ದನಂಗಳೂ ಹಟ್ಟಿ ಸೇರಿಯೊಳೊ. ಆದೊರೂ ನೊಡೊನೊತ ಜೆಡಿ ಹೆಗ್‌ಲ್‌ಲಿ ಇಸಿ ಹೊರ್ಟೆ".

"ಒಬ್ಬನೇ ಹುಕ್ಕಪಾ... ?" ಪುಕ್ಕಲ ಪ್ರಸಾದ ಅಚ್ಚರಿಂದ ಕೇಳ್ತ್.

"ನಂಗೆಂತ ಹೆದ್ರಿಕೆ ಕೂಸೂ...ಬೆಡಿ ತಕಂಡಳೆ ಅಲ್ಲಾ?"

"ಮುಂದೆ ಏನಾತ್ ಹುಕ್ಕಪಾ... ...?" ನೊಡುಲಿ ರಸಭಂಗ ಆದರ ಸೈಸದ ಅಮೃತಾ ಕೇಳ್ತ್.

"ಕಾಡ್‌ಲಿ ಸುಮಾರ್ ಅರ್ಧ ಮೈಲ್ ಹೋದೆ. ಹುಲಿನ 'ಹೂ ಹೂ' ಹಕ್ಕಲೆ ಆಕಂಡ್ ಬಾತ್. ಮಬ್ಬು ಕತ್ತಲೆ ಬೇರೆ. ಕಳ್ಳ ಹೆಜ್ಜೆ ಹಾಕಂಡ್ ಹಕ್ಕಲೆ ಹೋಗಿ ನೋಡ್‌ನೆ..!"

"ಎಂತ ಹುಕ್ಕಪಾ... ...? ಎಂತದ್ ನೋಡ್ದರಿ.....?"

"ನೋಡ್ದು ಎಂತದ್? ಹುಲಿನ ಕಾಲ್ ಅಣ್ಕನ ಪಿಡ್ತಲಿ ಸಿಕ್ಕಿಟು. ಬುಡ್ಸಿಕಂಬಕೆ ಹುಲಿ ತಿಂರ್ಟದೆ. ಅಣ್ಕ್ ತೇಳ್ರೆ ಗೊತ್ತುಟಾ...?"

"ಇಲ್ಲೆ ಹುಕ್ಕಪಾ..ಎಂತದ್‌ಅದ್?"

"ಅದ್ ಚಿಪ್ಪು ಹಂದಿ"

"ಓ..ಚಿಪ್ಪು ಹಂದಿ.. ಅದ್ ನಮ್ಮ ಪಾಠ ಪುಸ್ತಕಲಿ ಉಟ್ಟು" ಪ್ರಸಾದ ಹೇಳ್ತ್.

"ನಿನ್ನ ಪಾಠದ್ದ್ ಅಲ್ಲೇಯರ್ಲಿ. ಈಗ ನಾವು ಹುಕ್ಕಪನ ಹಂದಿ ಕತೆ ಕೇಳೊನೊ"ಅಭಿಷೇಕ ಸಿಡ್ಕಿತ್.

" ಹಂದಿ ಕತೆ ಅಲ್ಲಯಾ, ಹುಲಿ ಕತೆ" ಅಲಕಾ ತಿದ್ದಿತ್.

"ಅಯ್ಯೋ.. ಹಂದಿ ಹುಲಿ ಎಡ್ಡೂ ಇರುವಕತೆ. ನೀವು ಹೇಳಿ ಹುಕ್ಕಪಾ" ಅಮೃತಾ ಮಧ್ಯಸ್ತಿಕೆ ವೈಸಿತ್.

"ಚಿಪ್ಪು ಹಂದಿಗೆ ಹೆಸ್ರೇ ಹೇಳುವಾಂಗೆ ಗಟ್ಟಿ ಚಿಪ್ಪುನ ಹೊದಿಕೆ ಇದ್ದವೆ. ಏನಾರ್ ಅಪಾಯ ಬಾಕನ ಇಡೀ ದೇಹನಚಿಪ್ಪಿನ ಒಳಗೆ ತಕಂಡ್ ಒಂದು ಉಂಡೆ ಆಗಿ ತನ್ನ ರಕ್ಷಣೆ ತಾನ್ ಮಾಡಿಕಂಡದೆ. ಇಂತಚಿಪ್ಪು ಹಂದಿನ ಪಿಡ್ತಕ್ಕೆ ನಮ್ಮ ಹುಲಿರಾಯನ ಸೆಕ್ಕಿಕಂಡಿತ್ತ್"

"ಅಯ್ಯೋ ಪಾಪ..!" ಕೀರ್ತಿ ಹೊಟ್ಟೆ ಉರ್ಸಿತ್.

"ಪಾಪಗಡ! ಆ ಹುಲಿನೇ ಅಲ್ಲ ಹುಕ್ಕಪ ನಮ್ಮ ಹಟ್ಟಿಂದ ಗಂಗೆ ಹಸ್‌ನ ಕೊಂದ್ ತಿಂದದ್?"ಅಲಕ ಹೇಳ್ತ್.

"ಅದೇ ಹುಲಿತ ಹೇಂಗೆ ಹೇಳಿಯು?" ಕೀರ್ತಿ ಹುಲಿನ ಪಕ್ಷನ ಬುಟ್ಟು ಕೊಟ್ಟುತ್ಲ್.

"ಯಾದೋ ಒಂದು. ಹುಲಿನ ಗುರ್ತ ಇಸಿದೊವು ಯಾರ್? ಮತ್ತೇನಾತ್ ಹುಕ್ಕಪಾ..?"ಅಮೃತಾ ಮತ್ತೆ ಕತೆನ ಹಳಿಗೆ ತಂದ್ ನಿಲ್ಸಿತ್.

ಮಕ್ಕಳ ಮಾತ್ ಕೇಳಿ ಅಜ್ಜಿ ನೆಗಾಡ್ತೊ. ಮನ್ಸ್ ಮನ್ಸ್ ಕಟ್ಟ್‌ಸಿಕಂಡ ಹಲ್ಲ್‌ಗ ಪಳ್ಳನೆ ಹೊಳ್ತೊ. ಅಜ್ಜನೂ ಮಕ್ಕಳ ಮುದ್ದು ಮುದ್ದು ಮಾತ್‌ಗಳ ಕೇಳಿಕಂಡ್ ಮುಂದೆ ಹೇಳ್‌ದೊ.

"ಚಿಪ್ಪು ಹಂದಿನ ಹಿಡ್ತ ಹಣ್ಣು ಸತ್ತ ಆಕನ ಹುಲಿ ಕಾಲ್‌ನ ಎಳ್ಕಂಬಕೆ ನೋಡ್ತಿತ್. ಆಗ ಹಂದಿ ಹಿಡ್ತನ ಮತ್ತೆ ಬಿಗಿ ಮಾಡ್ತಿತ್. ಜೀನಂದೊಳೂ ಹೆದ್ರಿಕೆಂದೊಳೂ ಹುಲಿ ಕಿರ್ಚ ಕಂಬತಿತ್. ಹುಲಿನ ಗುಂಡು ಹಾರ್ಸಿ ಕೊಲ್ಲುವಾಂಗೆ ಇಲ್ಲೆ. ಹುಲಿ ಬೇಟೆ ಅಪರಾಧ. ಹಂದಿಗೇ ಹೊಡ್ದರೂ ಹುಲಿನ ಲಾಗಂದಾಗಿ ಗುರಿತಪ್ಪಿ ಗುಂಡು ಹುಲಿಗೇ ಬೊಡ್ದುಬುಡ್ದು. ಏನ್ ಮಾಡ್ದು?"

"ಮತ್ತೇನ್ ಮಾಡ್ದುರಿ ಹುಕ್ಕಪಾ... ...?"ಮಕ್ಕ ಎಲ್ಲ ಒಂದೇ ದನಿಲಿ ಕೇಳ್ತೊ.

"ನೋಡೊನೊ ತೇಳಿ ಬೆಡಿ ನೇಚಿ ಆಕಾಶದ ಕಡೆ ಗುಂಡು ಹಾರ್ಸಿದೆ."

"ಢಂ...ತೇಳುವ ಸದ್ದ್ ಬಾತ್ ಅಲ್ಲ ಹುಕ್ಕಪಾ..?" ಪ್ರಸಾದ ಕೆಬಿಗೆ ಬೆರ್ಳ್ ಇಸಿಕಂಡ್ ಕೇಳ್ತ್.

" ಈಗ ಯಾಕೆ ಕೆಬಿಗೆ ಬೆರ್ಳ್ ಇಸಿಕಂಡಿಯಾ?"ಅಭಿಷೇಕ ತಮಾಸ್ ಮಾಡ್ತ್.

ಅಮೃತಂಗೆ ತಾಳ್ಮೆ ಕೆಟ್ಟ್ ಹೋತ್. "ಗುಂಡು ಹಾರ್ಸ್‌ಕನ ಏನಾತ್ ? ಹೇಳಿ ಹುಕ್ಕಪಾ.."

ಅಜ್ಜ ಕತೆನ ಮುಂದುವರ್ಸಿದೊ. "ಡಮಾರ್‌ತ ಸಿದ್ದ್ ಇಡೀ ಕಾಡ್‌ನ್ನೇ ನಡ್ಗಿಸಿದ ಸದ್ದ್‌ಗೆ ಹದ್ಕಿ ಬಿದ್ದ ಚಿಪ್ಪುಹಂದಿ ಅದರ ಹಿಡ್ತನ ಮತ್ತೂ ಬಿಗಿ ಮಾಡ್ತ್. ಜೀವ ಭಯಂದ ಹೆದ್ರಿ ಹೋದ ಹುಲಿ ಚಿಪ್ಪುಹಂದಿನ ಅಷ್ಟ್ ದೂರಕೆ ಕೊಡ್ಕಿ ಇಟ್ಟುತ್. ದೊಡ್ಡ ಪಟ್ಟೆಹುಲಿ ಸಣ್ಣಚಿಪ್ಪು ಹಂದಿಂದ ಬುಡ್ಸಿಕಂಡ್ ಕಾಡ್‌ನ ಒಳಗೆ ಓಡಿ ಹೋತ್."

"ಅಬ್ಬ... ...! "ಮಕ್ಕ ಎಲ್ಲ ಬುಡ್ಗಡೆನ ಉಸುರು ಬುಟ್ಟೊ.

ಅಜ್ಜಕತೆ ಮುಗ್ಸ್‌ಕನ ಕೀರ್ತಿ ಅಜ್ಜಿಗೆ ಒರ್ಗಿ ತೂಕಡ್‌ತಿತ್.

"ಕತೆ ಆತಲೆ? ಎಲ್ಲ ಊಟಕ್ಕೆ ಏದ್ರಿ. .. ಕೀರ್ತಿ ಎದ್ರ್ ಮಗಳೆ. ಅತ್ತೆ ಊಟಕ್ಕೆ ಬಾಳೆ ಹಾಕಿಟು". ಕೀರ್ತಿನ ತಟ್ಟಿ ಎದ್ದ್ಸಿ ಅಜ್ಜಿ ಒಳಗೆ ಹೋದೊ. ಅಜ್ಜನೂ, ಮಕ್ಕಳೂ ಒಟ್ಟಿಗೆ ನಡ್ದೊ..

✍ ಲೀಲಾ ದಾಮೋದರ
ಧಾತ್ರಿ, ಗಾಂಧಿನಗರ, ಸುಳ್ಯ, ದ.ಕ.

# ಮೋರೆ ಮುಚ್ಚಿಕಂಡ್ ಓಡಾಡುವಾಂಗೆ ಆತಲೇ!?

ಮೋರೆ ಮುಚ್ಚಿಕಂಡ್ ಓಡಾಡುವಾಂಗೆ ಇಂವಂಗೆ ಏನಾತ್ ಕೊಲ್, ದರೋಡೆ ಏನಾರ್ ಮಾಡ್ಯುಟ್ಟಾಂತ ತಲೆ ಕೆರ್ಕಂಜೇಡಿ, ಕೊರೊನಾ ಬಂದ್ ಮೋರೆ ಮುಚ್ಚಿಕಂಡ್ ಓಡಾಡುವಾಂಗೆ ಆದ್ದ್ ಅಸ್ಟೆ! ಆಸ್ಪತ್ರೆಗಳ್ಲಿ ಆಪರ್ಸನ್ ಮಾಡ್ಕನ ಡಾಕ್ಟ್ರಗ, ನರ್ಸ್ಗ, ವಿಜ್ಞಾನಿಗ ಪ್ರಯೋಗ ಸಾಲೆಗಳ್ಲಿ ಹಾಕಣ್ತಿರುವ ಮೋರೆ ಗವುಸು ಅತ್ವಾ ಈಗ ಎಲ್ಲವು ಹೇಳುವಾಂಗೆ ಮಾಸ್ಕ್ ಈಗ ಎಲ್ಲವುಕು ಬಂದುಟು. ಈ ಮಾಸ್ಕ್ ಇಲ್ಲದೆ ಮನೆಂದ ಹೊರುಡುವಾಂಗೆನೇ ಇಲ್ಲೆ. ಒಂದುವರೆ ಎರ್ಡ್ ವರ್ಸದ ಕೂಸುಗ ಕೂಡಾ ಮಾಸ್ ಮಾಸ್ ಬೇಕೂಂತ ಹೇಳುವಾಂಗೆ ಆಗುಟ್ಟು.

ಈ ಮಾಸ್ಕ್ಂದಾಗಿ ಕೆಲವರ ಗುರ್ತವೇ ಸಿಕ್ಕುದುಲೆ. ಯಾರ್ಂತ ಕಣ್ಣ್ ಪಿಳಿ ಪಿಳಿ ಮಾಡಿ ನೋಡ್ಕನ ಈ ಮೊಯಿಸಂಗೆ ಗುರ್ತ ಸಿಕ್ಕಿತ್ಲೇಂತ ಮಾಸ್ಕ್ ಜಾರ್ಸಿ ಮೋರೆ ತೋರ್ಸೊಕಾದೆ. ದಾರಿಲಿ ಹೋಕನ ಎದ್ರ್ ಸಿಕ್ಕಿದಂವ ನೋಡಿ ನೆಗಾಡ್ತಾ? ಮೋರೆ ತಿರ್‌ಂಟಿಸಿತಾ? ತೂಂತ ಹೇಳ್ತಾ ಒಂದೂ ಗೊತ್ತೇ ಆದುಲ್ಲೆ. ಅಂವನ ಮೇಲೆ ಸಿಟ್ಟ್‌ಲಿ ಕಾಂಕ್‌ರ್ಸಿ ಉಗಿವ ಹಾಂಗೂ ಇಲ್ಲೆ. ಬಾನ ನೋಡಿ ಉಗ್ದರೆ ತನ್ನ ಮೋರಗೇ ಬೀಳ್ದೂಂತ ಹೇಳುವಾಂಗೆ, ಉಗ್ದರೆ ಮಾಸ್ಕ್ ಒಳೆಗೇ ನಮ್ಮ ಮೋರೆ, ಮೀಸೆಗೇ ಅಂಟಿಕಂಬೊದು. ಈಗ ಮೂಕುಗೂ ಹೆಚ್ಚಿ ಕೆಲ್ಸ ಇಲ್ಲೆ. ಪಾರ್ಕ್‌ಲಿ ತಿರ್ಗಾಡ್ಕನ ಹೂಗಳ ಪೊರ್ಮಳನೂ ಬಾದುಲ್ಲೆ. ಚರಂಡಿನ ನಾತನೂ ಗೊತ್ತಾದುಲ್ಲೆ. ಸೀತ ಗೀತ ಆದರೆ ಅದರೊಳೆಗೇ ಸೀನೊಕು. ಸೆಗ್ಗಿನ ಮೇಲೆ ಎಳ್ದ್ ಸ್ಟಾಕ್ ಮಾಡಿಕಣೊಕು. ಕಪನ, ಗುಟ್ಕನ ನುಂಗಿಕಣಕು. ನಾವು ಬುಟ್ಟ ಉಸುರುನ ನಾವೇ ಎಳ್ಕಣಕು. ಹೊರೆಗೆನ ಸುದ್ದ ಗಾಳಿನ ಉಸುರಾಡುವಾಂಗೇ ಇಲ್ಲೆ. ಈ ಮಾಸ್ಕ್ಂದಾಗಿ ಸೀನಣ್ಣಂದರಿಗೆ, ಗಣಿಗಾರಿಕೆಯವುಕೆ ತುಂಬಾನೆ ಕಸ್ಟ!?

ಈಗೆಲ್ಲಾ ಮಾಸ್ಕ್ ಹಾಕಣದೆ ಎಲ್ಲೂ ಹೊರೆಗೆ ಹೋಕೇ ಬೊತ್ತಲೆ! ಇದ್ ಜಾರೀ ಕಸ್ಟ ಕಾಂಬೊದು ಗೂಡೆಗಳಿಗೆ. ಅವು ಮಾಡ್ವ ಮೇಕಪ್, ಲಿಪ್ಸ್ಟಿಕ್ ಒಂದೂ ಕಾಂಬೊದೇ ಇಲ್ಲಲೆ. ಕೆಲವು ಗೂಡೆಗ ಹೋಗಿ ಮಾಸ್ಕ್ ಮಾರವರೊಟ್ಟಿಗೆ ತುಟಿ ಕಾಂಬಂತ ಮಾಸ್ಕ್ ಉಟ್ಟೋಂತ ಕೇಳ್ದೊಗಡ! ಇನ್ನು ಅವರ ಚೂಡಿಗೋ, ಹಾಕುವ ಜೋಡಿಗೋ ಮೇಚ್ ಆಗುವ ಮಾಸ್ಕ್‌ಗ ಕೂಡಾ ಈಗ ಮಾರ್ಕೇಟಿಗೆ ಬಂದುಟುಗಡ! ಈಗ ಮಾಸ್ಕ್ ಗಳ್ದೇ ಜೋರು ಯಾಪಾರ. ಇಪ್ಪತ್ತ್ ರೂಪಾಯಿಂದ ಐನೂರು, ಸಾವ್ರ ರೂಪಾಯಿವರೆಗೂ ಮಾಸ್ಕ್‌ಗ ಉಟ್ಟುಗಡ! ಕೆಲವರ ಮಾಸ್ಕ್‌ಲಿ ವೆಂಟಿಲೇಟರ್ ನಾಂಗೂ ಏನೋ ಒಟ್ಟಿಗೆ ಉಟ್ಟು. ಒಟ್ಟಾರೆ ತರಾವರಿ ಬಣ್ಣ ಬಣ್ಣದ ಮಾಸ್ಕ್ ಗಳೇ ಮಾಸ್ಕ್ ಗ! ಈಗೀಗ ಬೆಳ್ಳಿನ, ಚಿನ್ನದ ಮಾಸ್ಕ್ ಗಳನೂ ತಯಾರ್ ಮಾಡಿಕೆ ಸುರುಮಾಡಿಯೊಳೊಂತ ಸುದ್ದಿ ಉಟ್ಟು! ಈ ಮಾಸ್ಕ್ ಹಾಕಾಟಂದಾಗಿ ಗುಲಾಬಿ ಬಣ್ಣದ ಕೆನ್ನೆ, ತೊಂಡೆಹಣ್ಣ್ ನಾಂಗೆನ ತುಟಿ, ಸಂಪಿಗೆ ಮುಗುಟುನಾಂಗೆನ ಮೂಕು, ಮಲ್ಲಿಗೆ ಮುಗುಟುನಾಂಗೆ

ಹಲ್ಲ್ ಗಂತ ಗೂಡೆಗಳ ವರ್ಣಿಸುವ ಕವಿಗೆಲ್ಲಾ ಸುಮ್ಮನೆ ಅವರ ಮಾಸ್ಕ್ ನ ಬಣ್ಣಗಳನೇ ನೋಡಿಕಾಗುಟ್ಟು!

ಮಾಸ್ಕ್ ಹಾಕುದರ ಬಗ್ಗೆ ಸರ್ಕಾರಂದ ದಿನಕೊಂದು ಕಾನೂನು! ಬೈಕ್. ಕಾರ್ಲಿ ಒಬ್ಬನೇ ಹೋಕನ ಮಾಸ್ಕ್ ಹಾಕೊಕೂಂತ ಇಲ್ಲೇಂತ ಒಮ್ಮೆ ಹೇಳ್ರೆ. ಮರ್ ದಿನ ಒಬ್ಬನೇ ಇರ್ಲಿ ಅರ್ದನೇ ಇರ್ಲಿ ಮಾಸ್ಕ್ ಹಾಕೊಕೇಂತ ರೂಲ್ಸ್. ಮಾಸ್ಕ್ ಹಾಕದವ್ರುಕೆ ಸಾವ್ರ ರೂಪಾಯಿ ದಂಡ ಇದ್ದದ್ ಮತ್ತೆ ಇನ್ನೂರ ಐವತ್ತಕ್ಕೆ ಇಳ್ತ್! ಅಂತೂ ಇಂತೂ ದುಡ್ಡು ಮಾಡೊವ್ಕೆ ಒಂದು ದಾರಿ ಅಸ್ಟೆ!? ಇನ್ನು ಮಾಸ್ಕ್ ಹಾಕುವ ಜನರೋ. ಕೆಲವ್ರು ಜನ ಮಾಸ್ಕ್ ಮೋರೆಗೆ ಬಿಗ್ದ್ ಬೊಳ್ಳುಗೆ ಹೊರ್ಟರೆ ಹಿಂಬೊತ್ ಮನೆಗೆ ಬಾಕನ ಮುಟ್ಟಿ ಹಂಗೇ ಇದ್ದದೆ. ಅವ್ರು ಬುಟ್ಟ ಉಸುರ್ನೇ ಉಸುರಾಡಿ ಉಸುರಾಡಿ ಸರೀರಲಿ ಅಮ್ಲ ಜನಕದ ಕೊರ್ತೆಂದ ಆಸ್ಪತ್ರೆಗೂ ಸೇರೊವ್ರು ಒಳೊ. ಇನ್ನು ಕೆಲವ್ರು ಕೊರೊನಾಕ್ಕೆ ಹೆದ್ರಿ ಮನೆ ಬಾಗ್ಲ್ ಗೆ ರಂಗೋಲಿ ಹಾಕ್ಕನೂ ಮಾಸ್ಕ್ ಬಿಗ್ದ್ ಕಂಡೇ ಇದ್ದವೆ. ಮನೆ ಜಗ್ಲಿಲಿ ಓಡ್ಯಾಡ್ಕನೂ ಮಾಸ್ಕ್! ಅಂಗಳಲಿರುವ ಹೂಗಳ ಕೊಯ್ಯಕನೂ ಮಾಸ್ಕ್! ಹಳ್ಳಿಗಳ್ಲೂ ಒಬ್ಬನೇ ತೋಟಕೆ ಹೋಕನೂ. ಅಜೀಜಿ ತಿರ್ಗಾಡ್ಕನೂ ಮಾಸ್ಕೇ ಮಾಸ್ಕ್! ಈ ಮಾಸ್ಕ್ ಗಳ ಹಾಕಿ ಹಾಕಿ ಕೆಲವರ ಮೂಂಕು ಚಪ್ಪಿ ಆಗುಟು ! ಮೋರೆ ಮಾಸ್ಕ್ ನಸ್ಟಗಲ ಬೀನದವರ ಮೂತಿನಾಂಗೆ ಕೆಂಪಾಗುಟ್ಟು! ಬೀಸುವ ಗಾಳಿಲಿ ವೈರಾಣು ಇರ್ದುಲೇಂತ ತಿಳ್ದವ್ರು ಹೇಳ್ತೂ ಮೊಂಯಿಸಂಗೆ ಈ ಕೊರನದ ಹೆದ್ರಿಕೆ ತಲೆಗೆ ಅಡ್ರಿ ಹೋಗುಟು. ಈಗನ ಮೊದುವೆಗಳ್ಲಿ ಭಟ್ರ್ ಮಂತ್ರ ಎಲ್ಲಾ ಹೇಳಿ ಅಕೇರಿಗೆ ನವದಂಪತಿಗ ಇಬ್ಬರೂ ಮಾಸ್ಕ್ ಹಾಕುದು ಕಡ್ಡಾಯ. ಸಾಮಾಜಿಕ ಅಂತರ ಕಾಪಾಡಿಕಣಕೂಂತ ಉಪದೇಸಮಾಡುವೇಂತ ಜನ ತಮಾಸೆ ಮಾಡುವೆ!

ಇನ್ನು ಕೆಲವ್ರು ಪಡ್ಡೆ ಹೈದಂಗಳಿಗೆ ಬಿಸಾತೇ ಇಲ್ಲೆ. ಅಂಗಡಿಗೆ ಹೋಕನೂ ಮಾಸ್ಕ್ ಇಲ್ಲೆ. ಬೈಕ್ಲಿ ಮೂರು ನಾಕ್ ಜನ ಮೇಲೆ ಮೇಲೆ ಬಿದ್ದ್ ಕಂಡ್ ಹೋದ್ರೂ ಮಾಸ್ಕ್ ಇಲ್ಲೆ. ಮಾರ್ಕೇಟಗೆ ಜನಜುಂಗುಳಿಲಿ ಹೋದರೂ ಮಾಸ್ಕ್ ಇಲ್ಲದ ಬಿರ್ಸರೂ ಒಳೊ. ಇನ್ನು ರಾಜಕಾರಣಿಗ ಬಂದರೆ ಕೇಳೊಕೊ ಅವರ ಬೀಲಹಿಡಿಯವ್ರುಕೆ ಯಾವ ಕಾನೂನೂ ಲಗಾವ್ರು ಇಲ್ಲೆ. ಹುಳುಹುಪ್ಪಟೆಗೆ ನೆಳ ಮುತ್ತಿಕಂಡಾಂಗೆ ಮುತ್ತಿಕಂಡವೆ. ಪುಡಾರಿಗಳ ಮಕ್ಕಳ. ಪಿಳ್ಳೆಕಳ ಮೊದುವೆಗಿದುವೆ ಇದ್ದರಂತೂ ಕೇಳ್ಬೇ ಬೇಡ ಮಾಸ್ಕೂ ಇಲ್ಲೆ ಅಂತರನೂ ಇಲ್ಲೆ ಬೆಂತರನೂ ಇಲ್ಲೆ ,ದೇವ್ರೇ ಕಾಪಾಡೊಕು.

ಈ ಮಾಸ್ಕಂದ ಕೆಲವ್ರು ಜನಕೆ ಒಳ್ಳೆ ಉಪಕಾರನೂ ಉಟ್ಟು, ಯಾರಿಗಾರ್ ಸಾಲಕೊಡಿಕೆ ಇದ್ದರೆ ಅವ್ರು ಬಾದು ಕಂಡಾಂಗೇ ಮೋರೆ ಒಂಚೂರೂ ಕಾಣದಾಂಗೆ ಮಾಸ್ಕ್ ನೊಟ್ಟಿಗೆ ಟುವಾಲ್ನೋ. ಮಫ್ಲರ್ನೋ ಸುತ್ತಿಕಂಡರೆ ಅತ್ ಗುರ್ತೇ ಸಿಕ್ಕುದುಲ್ಲೆ. ಈ ಲಾಕ್ ಡೌನ್ ಎಲ್ಲಾ ಮುಗ್ದ್ ಹೆಂಡದಂಗ್ಡಿ ವೈನ್ಸಾಪ್ ಎಲ್ಲಾ ಓಪನ್ ಮಾಡುವೇಂತ ಹೇಳ್ಬೇ ಹೇಳ್ದ್ ಬೆಳ್ಳಗಿಗೆ ನಾಕ್ ಗಂಟೆಂದಲೇ ಕ್ಯೂವೇ ಕ್ಯೂ!? ಅಪ್ಪಂಗೆ ಮಕ್ಕಳಿಗೆಲ್ಲಾ

ಎಣ್ಣೆ ಹಾಕುವ ಅಪ್ಪೆಸ ಇದ್ದುದಲೇ. ಮಕ್ಕ ಅಪ್ಪನೆಪ್ ದೊಡ್ಡ ಸುಬಗರ್ ಅಪ್ಪು ಅದರ ಮುಟ್ಟುದೇ ಇಲ್ಲೆ! ಜೋಸ್ತಿಗಳೊಟ್ಟಿಗೆ ಮಾತ್ರ ಪಾರ್ಟಿ ಮಾಡ್ತು. ಅಂದ್ ಅಪ್ಪ ನಿತ್ತ್‌ಕಂಡಿದ್ದ ಕೂಡ್ಲೇ ಮಂಜನೂ ಹೋತ್! ಅಪ್ಪನ ಕಂಡ್ ಮಂಜ ತಲೆಂದ ಕುತ್ತಿಗೆ ಮುಟ್ಟ ಕಣ್ಣ್ ಮಾತ್ರ ಕಾಂಬಹಾಂಗೆ ಮಫ್ಲರ್ ಸುತ್ತಿಕಂಡ್ ಯಾಪಾರ ಮಾಡಿಯೇ ಬುಟ್ಟತ್! ಈಗನ ಗೂಡೆಗ ಏನೂ ಕಮ್ಮಿ ಇಲ್ಲೆ. ಅವ್ರುಕೆ ಬಿಜಾವಾಕೆ ಸುಲ್ಪ ಅವರ ವೇಲ್ ಉಟ್ಟಲೆ ಅದ್ ಬಹು ಉಪಯೋಗಿ ತಲೆ ಮರ್ಸಿಕಣೆಕೆ ದೊಡ್ಡ ಮಾಸ್ಕ್ ಎಳ್ದ್ ಮೋರೆ ಆದಸ್ಟ್ ಮರೆಯಚ್ಚಿಕಂಡ್ ವೇಲ್ನ ಸುತ್ತಿಕಂಡರೆ ಬುರ್ಕ ಹಾಕಿದಾಂಗೆ ಯಾರ್ಂತ ಹೆತ್ತ ಅವ್ವಂಗೂ ಗೊತ್ತೇ ಆಕಿಲ್ಲೆ! ಅಂತೂ ಈ ಮಾಸ್ಕ್ ಬಂದ್ ಕೊರೋನಾಂದ ಬಚಾವ್ ಆದಾಂಗೆ ಏನೇನೋ ಕಸ್ಟಗ ಪರಿಯಾರನೂ ಆದೊ. ಅಂತೂ ಮಾಸ್ಕೇ ಮಾಸ್ಕ್ ಎಲ್ಲೆಲ್ಲೂ ಮಾಸ್ಕ್!!!


**ಪಿ.ಜಿ. ಅಂಬೆಕಲ್,**

ಏಸ್ಸಾಸ್ ಡ್ಯಾಫೋಡಿಲ್ಸ್, # 203, ರಾಮಚಂದ್ರಪುರ, ಅಂಚೆ:– ಜಾಲಹಳ್ಳಿ.

ಬೆಂಗಳೂರು – 560013.

ಮೊ.ಸಂ. 9481390089.


## ಹಿಂಗಾರ




ಹಿಂದೆ ನಮ್ಮ ಜನಾಂಗದವು
ಇದ್ದೊ ಎಲ್ಲ ದೂರ ದೂರ
ಈಗ ನೋಡಿ ದಿನಂದಿನಕ್ಕೆ
ಆಗ್ತಾ ಒಳೊ ಬಾರಿ ಹತ್ರ
ಅಕಾಡೆಮಿಯಿಂದ ಬರ್ತಾ ಉಟ್ಟು
ಒಳ್ಳೆ ಒಳ್ಳೆ ಸೂತ್ರ
ಆನ್ ಲೈನ್ ಆಫ್ ಲೈನ್ ಎಲ್ಲಿ ನೋಡ್ರೂ
ಚಟುವಟಿಕೆಗ ನಿರಂತರ
ಕಥೆ, ಕವನ, ಲೇಖನ,
ಸಾಹಿತ್ಯಗಳ ಶೃಂಗಾರ
ಅದಕ್ಕೆ ಆಸರೆಯಾಗಿ ಬಂದುಟು ಈಗ
ಪ್ರೀತಿಯ ಈ 'ಹಿಂಗಾರ'!


✍ ಪ್ರೀತಮ್ ಎ. ಜಿ.

ಅಡ್ಕಾರು ಮನೆ, ಜಾಲ್ಸೂರು ಅಂಚೆ, ಸುಳ್ಯ ತಾಲೂಕು. ದ.ಕ. –574239

ದೂರವಾಣಿ: 974A542944

**ಪುಸ್ತಕ ವಿಮರ್ಶೆ**

# ಅರೆಬಾಸೆಲಿ ಪ್ರಕಟ ಆದ ರೂಪಕ ಮತ್ತೆ ನಾಟಕ ಪುಸ್ತಕಗಳ ಅವಲೋಕನ

ಅರೆಬಾಸೆಲಿ ಎಲ್ಲಾ ಬಗೆನ ಸಾಹಿತ್ಯಗ ಪ್ರಕಟ ಆಗೋಕೊ ತೇಳಿಕೆ ಕುಸಿ ಆದೆ. ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಮೇ 2012ರ್ಲಿ ರಚನೆ ಆದಮೇಲೆ ಕತೆ ಪುಸ್ತಕ, ಪೊದ್ಯ ಪುಸ್ತಕ, ಕಾದಂಬರಿ, ನಾಟಕ, ನೆಸ್ಟುನ ಪುಸ್ತಕಗ, ವೈಚಾರಿಕ ಲೇಖನಗ, ಅನುಭವಕತೆಗ, ಆತ್ಮಚರಿತ್ರೆಗ, ಸಂಸ್ಕೃತಿಗೆ ಸಂಬಂಧಿಸಿದ ಪುಸ್ತಕಗ, ಸಂಶೋಧನಾಗ್ರಂಥಗ, ಮಹಾ ಪ್ರಬಂಧಗ ಹಿಂಗೆ ಸಾಹಿತ್ಯದ ಬೇರೆ ಬೇರೆ ಪ್ರಕಾರಗ ಅರೆಬಾಸೆಲಿ ಹೆಚ್ ಹೆಚ್ ಪ್ರಕಟ ಆಕೆ ಸುರು ಆದ್ ಜೆನ ಅರೆಬಾಸೆನ ತಿರಿಗೆ ನೋಡುವಂಗೆ ಅವ್ರುಟು. ಅರೆಬಾಸೆ ಸಾಹಿತ್ಯ ಓದವ್ರುಕೆ ಅರೆಬಾಸೆ ಸಾಹಿತ್ಯಲಿ ಪ್ರಕಟ ಆದ ತುಂಬಾ ಪುಸ್ತಕಗಳ ಬಗ್ಗೆ ಸಮಗ್ರ ಮಾಹಿತಿ ಇಲ್ಲೆ. ನಾ ಇಲ್ಲಿ ಬರೆವ ಉದ್ದೇಶ ಇಷ್ಟರವರೆಗೆ ಅರೆಬಾಸೆಲಿ ಪ್ರಕಟ ಆದ ನಾಟಕ ಪುಸ್ತಕಗಳ ಮತ್ತೆ ಶ್ರೀ ಯೋಗೀಶ ಹೊಸೋಳಿಕೆಯವರ 'ಪುಣ್ಯಕೋಟಿ' ಅರೆಬಾಸೆನ ರೂಪಕದ ಬಗ್ಗೆ ನಮ್ಮ ಓದ್‌ಗ್‌ರಿಗೆ ಪರಿಚಯ ಮಾಡಿಕೊಡ್ದು.

ಅರೆಬಾಸೆಲಿ ಮಾಡ್ದ ಸುರೂನ ನಾಟಕ (ಅರೆಬಾಸೆಯ ಮೊದಲ ಅಪ್ರಕಟಿತ ನಾಟಕ)

ಸುಮಾರು 1958ರ್ಲಿ ಶ್ರೀ ಕೊಳಂಬೆ ಪುಟ್ಟಣ್ಣಗೌಡ್ರು ಬರ್ದ 'ತಾಳಿ' ಅರೆಬಾಸೆಲಿ ಮಾಡ್ದ ಸುರೂನ ನಾಟಕ. ಇದರ ಶಾಲೆ ವಾರ್ಷಿಕೋತ್ಸವಗಳಿಗೆ ಮಕ್ಕಳಿಗೆ ಪ್ರಾಕ್ಟೀಸ್ ಮಾಡ್ಸಿ ಆಡಿಸ್ತಿದ್ದೊ ಎನ್ನುವ ಮಾಹಿತಿ ಉಟ್ಟು. ಆದರೆ ಪುಸ್ತಕ ರೂಪಲಿ ಹೊರಬಾತ್ಲೆ. ಅದೇ ರೀತಿಲಿ ಸಾಲೆಗಳ ಸ್ಕೂಲ್ಡೆ ಗಳಿಗೆ ಸುಳ್ಯ ಸುತ್ತ ಮುತ್ತ ತುಂಬಾ ಜನ ನಾಟಕಗಳ ಬರ್ದ್, ಮಕ್ಕಳಿಗೆ ಹೇಳಿ ಕೊಟ್ಟ್ ಆಡ್ಸಿದ ವಿಷಯ ನಾವ್ರುಗೆ ಗೊತ್ತುಟು.

ಅರೆಬಾಸೆಲಿ ಸುರೂಗೆ ಅಚ್ಚಾದ ನಾಟಕ (ಅರೆಬಾಸೆಯ ಮೊದಲ ಪ್ರಕಟಿತ ನಾಟಕ)

ವಿದ್ವಾನ್‌ಟಿ.ಜಿ. ಮುಡೂರು ಇವ್ರು 2015ರ್ಲಿ ಬರ್ದ'ಬೊಳ್ಳಾಕನ ಮುಗ್ತ್' ನಾಟಕ ಅರೆಬಾಸೆಲಿ ಪ್ರಕಟ ಆದ ಸುರೂನ ನಾಟಕ. ಆಮೇಲೆ ಶ್ರೀಮತಿ ಬೈತಡ್ಕ ಜಾನಕಿ ಬೆಳ್ಯಾಪ್ಪವ್ರು 2017ರ್ಲಿ 'ಬೆಳ್ಳಿ ಚುಕ್ಕಿಗ' ತೇಳುವ 6 ಸಣ್ಣ ನಾಟಕಗಳ ಸಂಗ್ರಹ ಇರುವ ಪುಸ್ತಕನ ಹೊರತಂದೊ. ಅರೆಬಾಸೆನ ಹಿರಿಯ ವಿದ್ವಾಂಸರ ಅಭಿಪ್ರಾಯದ ಪ್ರಕಾರ ಅರೆಬಾಸೆ ಸಾಹಿತ್ಯಲಿ ಪದ್ಯಗಳಿಂದೊಳು ನಾಟಕವೆ ಸುರೂಗೆ ಬಂದದ್.1958ರ ಕೊಳಂಬೆ ಪುಟ್ಟಣ್ಣಗೌಡ್ರ 'ತಾಳಿ' ನಾಟಕದ ರೀತಿಲಿ ಅಂದ್‌ಂದಲೇ ಶಾಲಾ ವಾರ್ಷಿಕೋತ್ಸವಗಳಲ್ಲಿ ಅಲ್ಲಲ್ಲಿ ಕೆಲವ್ರು ಜನ ನಾಟಕಗಳ ಬರ್ದ್ ಮಕ್ಕಳ ಮೂಲಕ ಪ್ರದರ್ಶನ ಮಾಡ್‌ತ್ತಿದ್ದ ಎಂಬ ವಿಷಯ ಹಿರಿಯವರಂದ ಕೇಳಿ ಪಡ್ಕೊಂಡೊಳೆ.ಆದರೆ ಯಾರು ಅದರ ಪ್ರಿಂಟ್ ಮಾಡದೆ ಅದರಷ್ಟಕೆ ನಮ್ಮಂದ ಕಣ್ಮರೆ ಆದ್ ಅರೆಬಾಸೆಗೆ ದೊಡ್ಡ ನಷ್ಟ.

ವಿಷಾದದ ಸಂಗತಿ ತೇಳಿರೆ ಇಷ್ಟರವರೆಗೆ ಅರೆಬಾಸೆಲಿ ಪ್ರಕಟ ಆದ ನಾಟಕಗ ಬರೆ ಎರಡ್. ತುಂಬಾ ಜನ ಅರೆಬಾಸೆ ಸಾಹಿತಿಗ ನಾಟಕಗಳ ಬರ್ದ್ದುಟ್ಟೊ. ನಾಟಕ ಜನಂಗಳ

ಮುಟ್ಟುವಒಂದು ಪ್ರಬಲ ಮಾಧ್ಯಮ. ಅವುಗಳ ಪ್ರಕಟ ಮಾಡ್ರೆ ಅರೆಬಾಸೆ ಸಾಹಿತ್ಯ ಇನ್ನೂ ಹೆಚ್ಚ್‌ಗಟ್ಟ್ ಆದೆ. ಇತ್ತೀಚೆಗೆ ಅರೆಬಾಸೆ ಅಕಾಡೆಮಿಯವು ರಷ್ಯದ ನಾಟಕಕಾರ ನಿಕೋಲಾಯ್ ಗೋಗೋಲ್ ಇವು ಬರ್ದ್ ಇಂಗ್ಲೀಷ್‌ಗೆ ಅನುವಾದ ಆದ 'ದಿ ಇನ್ಸ್‌ಪೆಕ್ಟರ್ ಜನರಲ್' ಇದರ ಕೆ ಪಿ ಸುಬ್ಬಣ್ಣ ಹಾಗೂ ಕೆ ಪಿ ಅಕ್ಷರ ಕನ್ನಡಕ್ಕೆ ತಂದ್ರೊ. ಅದರ ಜಯಪ್ರಕಾಶ್ ಕುಕ್ಕೆಟ್ಟೆ ಇವು ಅರೆಬಾಸೆಗೆ ಅನುವಾದ ಮಾಡಿ 'ಸಾಹೇಬರು ಬಂದವ್ರೆ' ಅಂತ ಹೆಸ್ರ್ ಕೊಟ್ಟೊಳೊ. ಹೆಸ್ರ್‌ವಾಸಿ ನಿರ್ದೇಶಕ ಜೀವನರಾಂ ಸುಳ್ಯ ಇವರ ನಿರ್ದೇಶನಲಿ ನಾಟಕ ತರಬೇತಿನೂ ಆವ್ಟು. ಇದಕ್ಕಿಂತ ಹಿಂದೆ ಮೋಹನ್ ಸೋನಾ ಇವು ಶ್ರೀ ಪೂರ್ಣಚಂದ್ರ ತೇಜಸ್ವಿಯವರ 'ಕರ್ವಾಲೋ' ನಾಟಕನ ಅರೆಬಾಸೆಗೆ ಅನುವಾದ ಮಾಡಿ ತರಬೇತಿಕೊಟ್ಟು ಪ್ರದರ್ಶನ ಮಾಡೆಳೊ. ಆದರೆ ಅವು ಆ ನಾಟಕನ ಪ್ರಿಂಟ್ ಮಾಡ್ತ್ 'ಅದೇ ರೀತಿ ಅರೆಬಾಸೆ ನಾಟಕ ಲೋಕಲಿ ಈಗ ಮಿಂಚಿಕಂಡ್ ಇರುವ ಇನ್ನೊಬ್ಬ ಪ್ರತಿಭಾವಂತಕಲಾವಿದ ಸುಧೀರ್ ಏನೆಕಲ್. 'ಕಲಾಮಾಯೆ. ಸಾಂಸ್ಕೃತಿಕ ಸಂಸ್ಥೆ ಹುಟ್ಟು ಹಾಕಿ ರಂಗಭೂಮಿ ಮತ್ತೆ ಕಲಾ ಕ್ಷೇತ್ರಲಿ ಕೆಲ್ಸ ಮಾಡುವ ಸುಧೀರ್ 'ಒಂದಾನೊಂದು ಕಾಲಲಿ' ಮತ್ತು 'ಒಟ್ಟಿಗೆ ಒಳೊ' ಅರೆಬಾಸೆ ನಾಟಕಗಳ ಬರ್ದೊಳೊ.

ಅರೆಬಾಸೆಲಿ ಪ್ರಕಟಆದ ನಾಟಕ ಪುಸ್ತಕಗ

**'ಬೊಳ್ಳಾಕನ ಮುಗ್ತ್'**

ವಿದ್ವಾನ್‌ಟಿ.ಜಿ. ಮುಡೂರು ಇವು ಸುಮಾರ್ 1956ರ್ಲಿ ಬರ್ದ ಪ್ರಹಸನಗಳ ಅರೆಬಾಸೆ ಅಕಾಡೆಮಿಯವು 2015ರ್ಲಿ ಪ್ರಕಟಮಾಡ್ದೊ. ಈ ಪ್ರಹಸನ ಪುಸ್ತಕಕ್ಕೆ 'ಬೊಳ್ಳಾಕನ ಮುಗ್ತ್' ಎಂಬ ಹೆಸ್ರ್ ಕೊಟ್ಟೊಳೊ. ಅಂದ್‌ನ ಅಕಾಡೆಮಿ ಅಧ್ಯಕ್ಷ ಶ್ರೀ ಕೊಲ್ಯದ ಗಿರೀಶ್‌ವು ಇದರ ಬಗ್ಗೆ ಹಿಂಗೆ ಹೇಳೆಳೊ " ಇದ್ ದಕ್ಷಿಣಕನ್ನಡ ಗ್ರಾಮೀಣ ಅರೆಬಾಸಿಕರ ಸಾಂಸ್ಕೃತಿಕ ಜೀವನದ ಒಂದು ನೋಟ". ಒಟ್ಟು 59 ಪುಟಇರುವ ಈ ಪುಸ್ತಕಲಿ ಒಟ್ಟು 9 ದೃಶ್ಯಗ ಒಳೊ. ಲೇಖಕರ್ ಇದರ ಒಂದು ಪ್ರಹಸನ ಅಂತ ಕರ್ದರೂ ಇದು ಒಂದು ನಾಟಕ ಪುಸ್ತಕ. ಅವರೇ ಹೇಳುವ ಪ್ರಕಾರ ಇದರ್ಲಿ ಸಮುದಾಯದ ಸಜೀವ ಚಿತ್ರಣ ಉಟ್ಟು. ಗ್ರಾಮೀಣ ಆಡುಮಾತಿನ ಸೊಗಡು ಉಟ್ಟು. ಇದರ್ಲಿ ಆಟ, ಕೂಟ, ಬೇಟೆ, ಕಂಬಳ, ಅಂಕ, ಆಯನ ಎಲ್ಲಾ ಉಟ್ಟು. ಗರತಿ ಗಯ್ಯಾಳಿಗಳ ಹೊಂಚು ಮಿಂಚು, ಭೂತ ಪ್ರೇತಗಳ ಕಟ್ಟೆ ಪುರಾಣ, ಮದುವೆ ಮನೆ ಗದ್ದಲ, ಗಡಿಬಿಡಿ, ಅಲ್ಲಲ್ಲಿ ಹಾಸ್ಯವೂ ಉಟ್ಟು ಜೊತೆಗೆ ಗಂಭೀರವಾದ ವಿಷಯಗಳನೂ ಪ್ರಸ್ತಾಪ ಮಾಡೆಳೊ.

ಈ ಸಾಮಾಜಿಕ ನಾಟಕ (ಪ್ರಹಸನ) ವು ನಮ್ಮ 1956ರ ಕಾಲ ಘಟ್ಟಕ್ಕೆತಕಂಡ್ ಹೋದೆ.ಒಟ್ಟು 12 ಪ್ರಮುಖ ಪಾತ್ರಇರ್ವ ಈ ನಾಟಕಲಿಗ ಒಂದು ಗ್ರಾಮೀಣ ಪರಿಸರದ ಎಲ್ಲಾ ಮನಸ್ಥಿತಿನ ಹೊಂದಿರುವ ಜನಗಳ ಪ್ರಾತಿನಿಧಿಕ ಎಂಬ ರೀತಿಲಿ ಅದು ಉಟ್ಟು. ಈ ನಾಟಕದ ಇನ್ನೊಂದು ವಿಶೇಷ ಅಂತ ಹೇಳ್ರೆ ಕೆಲವು ಪಾತ್ರಗ ಸ್ಟೇಜ್ ಮೇಲೆ ಬರದೇ ಇದ್ರೂ, ನಮ್ಮ ಕಲ್ಪನೆಗೆ ಬಂದವೆ. ಇದರ್ಲಿ ಮುಖ್ಯ ಪಾತ್ರಗ ತಿಮ್ಮಪ್ಪ ಮಾಸ್ತ್ರು, ಭಟ್ರು, ಭಟ್ಟನ ಹೆಣ್ ಹಾರ್ತಿ, (ಭಟ್ಟಂಗೆ ಹಾರಂದ ಅಂತ ಸಹ ಅರೆಬಾಸೆಲಿ ಹೇಳುವೆ). ಮೊಂಟನ ಹೆಣ್ ಮೊಂಟಿ, ಮದ್ದಳೆ ಆಚಾರಿ, ತಾಳ ಕಟ್ಟ್‌ಸಿ ಕಂಡ

ಗಂಗಜ್ಜಿ. ಈ ನಾಟಕಲಿ ಹಾಸ್ಯ ಮತ್ತು ಯಕ್ಷಗಾನ ಗೀಳ್ ಇರುವ ನಂದನ ಪಾತ್ರ ವಿಶೇಷವಾಗಿ ನಮ್ಮ ಗಮನ ಅತ್ತ ಕಡೆ ಹೋವಾಂಗೆ ಮಾಡ್ತೆ. ಇವರ ಭಾಷೆ ಸರಳ. ಅವರೆ. ಅರ್ಥ ಗರ್ಭಿತ ಮತ್ತು ಹಾಸ್ಯಭರಿತ 'ಇದ್' ಸ್ಟೇಜ್ ಮೇಲೆ ಪ್ರದರ್ಶನಕ್ಕೆ ಒಳ್ಳೆ ನಾಟಕ. ಊರ್‌ಲಿ ಬೇರೆ ಬೇರೆ ಜಂಬರಲಿ ನಡೆವ ಘಟನೆಗ. ಕುಡುಕರ ದೊಂಬರಾಟಗ. ಬೇಟೆನ ಹುಚ್ಚುಗ. ಮದುವೆ ಮನೆಗಳ ಗಡಿಬಿಡಿಗ. ಹಿಂಗೆ ಒಳ್ಳೆ ರೀತಿಲಿ ಎಲ್ಲಾ ವಿಷ್ಯಗಳೂ ಇದರ್ಲಿ ಉಟ್ಟು.

ಈ ನಾಟಕದ ಹೀರೋ ಮಂಜ. ಇಡೀ ನಾಟಕಲಿ ಅಂವ ಯಕ್ಷಗಾನದ ಪದ ಹಾಡಿಕಂಡೇ ಇದ್ದು. ಅವನ ಅನುಕರಿಸಿಕೆ ಇನ್ನೊಬ್ಬ ನಂಜ. ನಂಜನ ಅಪ್ಪ ಒಬ್ಬ ರಸಿಕ ಮತ್ತೆ ಬೇಟೆ ಹುಚ್ಚಿನ ಜನ. ನಾಗಪ್ಪನ ಹೆಣ್ಣ್ ಶಿವಮ್ಮ. ಬಾರೀ ಜಾಣಾಕ್ಷಿ ಹೆಣ್ಣ್. ಸೋಂಪ ಮತ್ತು ಸೋಂಪನ ಹೆಣ್ಣ್‌ಗೌರಿ ನರೆ ಮನೆವು. ಮೋಂಟ ಒಬ್ಬ ಪೆದ್ದ ಹುಡ್ಗ. ಕುಶಲಿ ಒಬ್ಬ ಉದಾಸೀನದ ಮೂಠಿ. ಇವನ ದೋಸ್ತಿ ಕುಕ್ಕ. ಶಿನ ಒಬ್ಬ ಕೋಳಿ ಕಟ್ಟದ ಹುಚ್ಚಿನ ಮೊಣ್ಣ. ಸೂರಯ್ಯ ಇನ್ನೊಬ್ಬ ಭೀಷ್ಮ. ಕಾಯಿ ಕುಟ್ಟುದರ್ಲಿ ಅಂವ ಎತ್ತಿದ ಕೈ. ರಾಂಪ ಒಬ್ಬ ದಳ್ಳಾಲಿ. ಜೊತೆಗೆ ಜಂಬರ ಸುಧಾರಣೆ ಮಾಡುವ ಜನ. ಎಲ್ಲಾ ಹಳ್ಳಿಲೂ ಇವನಂತವು ಒಬ್ಬ ಇಬ್ಬರು ಇದ್ದವೆ. ಬೀಡಿ. ಸಿಗರೇಟ್ ಕುಡಿತ ಇವ್ರುಕೆ ಬೇಕ ಬೇಕು. ಈ ನಾಟಕದ ಎಲ್ಲಾ ಪಾತ್ರಗಳಿಗೆ ಟಿ.ಜಿ. ಮುಡೂರು ಇವ್ರು ಜೀವ ತುಂಬಿಳೊ.

### ಬೆಳ್ಳಿ ಚುಕ್ಕಿಗ

ಪೈತಡ್ಕ ಜಾನಕಿ ಬೆಳ್ಳಪ್ಪ ಇವರ ಅರೆಬಾಷೆ ನಾಟಕ ಸಂಕಲನ 'ಬೆಳ್ಳಿ ಚುಕ್ಕಿಗ'. ಅಕಾಡೆಮಿ ಗೌರವ ಪ್ರಶಸ್ತಿ ಪಡ್ಕಂಡ ಜಾನಕಿ ಬೆಳ್ಳಪ್ಪನವು ಅರೆಬಾಸೆ ಮತ್ತು ಗೌಡ ಜನಪದ ಸಾಹಿತ್ಯಕ್ಕೆ ಒತ್ತ್‌ಕೊಟ್ಟ್ ಅರೆಬಾಸೆ ಸಂಸ್ಕೃತಿಗೆ ಸಂಬಂಧಿಸಿದಂಗೆ 'ಹಸೆಮಣೆ'. ಮತ್ತೆ 'ಅಕ್ಷಯ' ಎಂಬ ಎರ್ಡ್ ಪುಸ್ತಕಗಳ ಬರ್ದೊಳೊ. ಇವರ 'ಬೆಳ್ಳಿ ಚುಕ್ಕಿಗ' ನಾಟಕ ಸಂಕಲನನ 2017ಲ್ಲಿ ಅರೆಬಾಸೆ ಅಕಾಡೆಮಿಯವು ಪ್ರಕಟ ಮಾಡ್ಯೊ. ಇದ್ಕೆ ಅಂದಿನ ಅಧ್ಯಕ್ಷ ಕೊಲ್ಯದ ಗಿರೀಶ್ ಅವ್ರು ನಾಲ್ಕ್ ಮಾತ್ ಬರ್ದ್ ಕೃತಜ್ಞತೆ ಸಲ್ಲಿಸಿಳೊ. ಇದ್ಕೆ ಯಾರಿಂದಲೂ ಇವ್ರು ಮುನ್ನುಡಿ ಬರ್ಶಿತ್ತಿಲೆ. ಒಟ್ಟು 82 ಪುಟ ಇರುವ ಈ ನಾಟಕ ಪುಸ್ತಕಲಿ ಒಟ್ಟು 6 ಸಣ್ಣ ನಾಟಕಗ ಇದ್. ಇದರ್ಲಿ 5 ನಾಟಕಗ ಇತಿಹಾಸ ಆಧಾರಲಿ ರಚನೆ ಇದ್ದರೆ. 'ಗೂಡೆಗಳೆ ಸಿಕ್ಕುದುಲೆ'. ಕೊನೆ ನಾಟಕ ಸಾಮಾಜಿಕ ವಿಷಯದ ಮೇಲೆ ಉಟ್ಟು.

ಲೇಖಕಿಯವರ ಮಾತ್‌ಗಳ್‌ಲಿ ಹೇಳ್ವದರೆ "ಹಿಂದಿನ ಕಾಲದ ಜೀವನ ಶೈಲಿನ ಕಣ್ಣುಂದೆ ತಂದ್ ಬರ್ದದ್?" ಅಂದ್ ನ ಜನರ ಪ್ರಾಮಾಣಿಕತೆ. ನೇರ ನುಡಿ. ರೈತ ಹೋರಾಟಗಾರರಧೈರ. ಮಳೆಗಾಲಲಿ ಕಾಡ್‌ಲಿ. ತೋಟಲಿ ಉಂಬುಳು ಕಾಟ. ಪ್ರಾಣಿಗಳ ಬಯಂತ ವಿಷಯಗಳ ಇತಿಹಾಸದ ಗಟನೆಗಳೊಟ್ಟಿಗೆ ಸೇರ್ಸಿ ಬರ್ದಅವರ ಶೈಲಿ ಬಾರೀ ಲಾಯಿಕ್ ಉಟ್ಟು. ಇದರ್ಲಿ ಇರುವ ಐತಿಹಾಸಿಕ ನಾಟಕಗಗ ತೇಳ್‌ರೆ 'ಕಿತ್ತೂರು ವೀರನಾರಿ'. 'ರೈತದಂಗೇಲಿ ಗುಡ್ಡೆಮನೆ ಅಪ್ಪಯ್ಯಗೌಡ'. 'ವಣ್ಕೆ ಓಬವ್ವ'. 'ಭಾರತದ ಕೋಗಿಲೆ ಸರೋಜಿನಿ ದೇವಿ ನಾಯ್ಡು' ಮತ್ತೆ 'ಮಹಾರಾಣಿ ಕಂಪ ನಂಜಮ್ಮಣ್ಣಿ ಒಡೆಯರ್'. ಇಲ್ಲಿ ಬರುವ ಎಲ್ಲಾ ಐತಿಹಾಸಿಕ ವ್ಯಕ್ತಿಗಳ 'ಬೆಳ್ಳಿ ಚುಕ್ಕಿಗ' ಅಂತ ಹೇಳುವ ರೀತಿಲಿ ಚಿತ್ರಿಸಿಳೊ. ಶಾಲೆ ಮಕ್ಕಳಿಗೆ ಅವರ ಶಾಲೆಗಳ ವಾರ್ಷಿಕೋತ್ಸವ ಮತ್ತೆಇತರ

ಸಾಂಸ್ಕೃತಿಕ ಕಾರ್ಯಕ್ರಮಗಳ್‌ಲಿ ಅತಿ ಕಡಿಮೆ ಅಂದರೆ ಅರ್ಧಗಂಟೆ ಸಮಯಲಿ ಆಡಿ ತೋರ್‌ಸಿಕೆ ಈ ನಾಟಕಗ ಬಾರಿ ಒಳ್ಳೆದ್. ಎಲ್ಲಾ ನಾಟಕಗಳ ಸಂಭಾಷಣೆಗ ಬಾರೀ ಸರಳ ರೀತಿಲಿ ಇದ್ದ್. ಒಂದು ಸವಿಸ್ತಾರವಾದ ಇತಿಹಾಸದ ಘಟನೆನ ನಾಟಕ ರೂಪಲಿ ಕಟ್ಟಿ ಕೊಟ್ಟೊಳೊ. ಇದರ್‌ಲಿ ಇರ್‍ವ ಇನ್ನೊಂದ್ ಸಾಮಾಜಿಕ ನಾಟಕ 'ಗೂಡೆಗಳೆ ಸಿಕ್ಕುದುಲೆ'. ಇದ್ ಒಂದು ಅರೆಬಾಸೆನ ಒಳ್ಳೆ ಹಾಸ್ಯ ನಾಟಕ ಅಂತೇಳಿ ಹೇಳಕ್. ಆದರೆ ನಾಟಕದ ಸ್ವರೂಪಲಿ ಏನೋ ಕೊರತೆ ಇದ್ದಂಗೆ ಕಂಡರೂ ಇಂದ್‌ನ ಸಾಮಾಜಿಕ ಪರಿಸ್ಥಿತಿನ ಲಾಯಿಕ್‌ಲಿ ಹೇಳಿಳೊ. ಇವರ 'ಕಿತ್ತೂರು ಚೆನ್ನಮ್ಮ' ನಾಟಕಲಿ ಲಾವಣಿ ಪದಗಳ ಸೇರ್‌ಸಿಳೊ. ಅರಬಾಸೆಲಿ ಸುರೂಗೆ ಲಾವಣಿ ಪದಗಳ ಬರ್‍ದ ಗೌರವ ಬಹುಶಃ ಇವುರ್ಕೇ ಸಿಕ್ಕೊಕು. ಈ ನಾಟಕಲಿ ಪದ್ಯವೇ ಪ್ರಧಾನವಾಗಿ ಮೂಡಿ ಬಂದುಟು. ಇದರ್‌ಲಿ ಕೋಲಾಟ ಪೊದ್ಯಗಳೂ ಒಳೊ. ಈ ನಾಟಕದ ನಿರೂಪಣೆಯೇ ಒಂದು ಹೊಸತನನ ಹುಟ್ಟು ಹಾಕಿಟು. ಈ ನಾಟಕಗಳ್‌ಲಿ ಸಂಭಾಷಣೆಗೆ ಎಷ್ಟು ಮಹತ್ವ ಉಟ್ಟೊ. ಪೊದ್ಯಗಳಿಗೂ ಅಷ್ಟೇ ಮಹತ್ವ ಕೊಟ್ಟೊಳೊ. ಶ್ರೀಮತಿ ಜಾನಕಿಯವು ಅರೆಬಾಸೆಲಿ ನಾಟಕಗಳ ಬರ್‍ದ್ ಬಾಸೆಗೆ ದೊಡ್ಡ ಕೊಡುಗೆ ನೀಡಿಳೊ.

ಅರೆಬಾಸೆ ರೂಪಕ, 'ಅರೆಬಾಸೆ ಪುಣ್ಯಕೋಟಿ'

ಅರೆಬಾಸೆಲಿ ಬಂದ ಸುರೂನ ಮತ್ತೆ ಒಂದೇ ಒಂದು ಪ್ರಕಟ ಆದ ರೂಪಕ ತೇಳ್ರೆ ಯೋಗೀಶ ಹೊಸೊಳಿಕೆಯವರ ಕನ್ನಡಂದ ಅನುವಾದ ಮಾಡ್ದ ಜನಪದ ಕಾವ್ಯ 'ಅರೆಬಾಸೆ ಪುಣ್ಯಕೋಟಿ'. ಇದ್ 2019ರ್‌ಲಿ ಕಿರಣರಂಗ ಅಧ್ಯಯನ ಸಂಸ್ಥೆ ಪ್ರಕಾಸನದ ಹೆಸ್‌ರ್‌ಲಿ ಪ್ರಕಟ ಆವುಟು. ಪುಣ್ಯಕೋಟಿ ಕತೆ ಕೇಳದ ಕನ್ನಡದ ಜನರೇ ಇರ್‌ಕಿಲೆ ಅಂತ ಹೇಳ್‌ರೆ ವಿಶೇಷದ ಮಾತಲ್ಲ. ಇಂತ ಜನಪದ ಕಾವ್ಯನ ಅರೆಬಾಸೆಲಿ ಬರ್‍ದ್ ಆ ಕಾವ್ಯದ ಪೊರ್ಲುನ ಜಾಸ್ತಿ ಮಾಡಿಳೊ. ಕಾಲಿ 16 ಪುಟ ಇರುವ ಈ ಸಣ್ಣ ಪುಸ್ತಕಲಿ ಒಂದು ಹೊಸತನ ಉಟ್ಟು. ಪುಣ್ಯಕೋಟಿ ಕತೆನ ಚಿತ್ರರೂಪಲಿ ಸಹ ಇದರ್‌ಲಿ ನೋಡಕ್. ಯೋಗೀಶರೇ ಹೇಳಿ ಕಂಡಂಗೆ, ಇದ್ ಅವು ರೂಪಕ ಮಾಡಿಕೆ ಬೇರೆ ನಿರ್ದೇಶಕರಿಗೆ ಕೊಡಿಕೆ ಬರ್‍ದದ್. ಮೂಲ ಕತೆಗೆತೊಂದರೆ ಆಗದಂಗೆ ಚೌಕಿ ಮೇಲಿ ರೈಸುವಂಗೆ ರಚನೆ ಮಾಡಿಳೊ. ಇದ್ ಅರೆಬಾಸೆ ಸಾಹಿತ್ಯಲಿ ಮೂಡಿಬಂದ ಸುರೂನ ನೃತ್ಯರೂಪಕ.

ಈ ಜನಪದ ಕಾವ್ಯ ಕನ್ನಡಂದೊಳು ಅರೆಬಾಸೆಲಿ ಲಾಯಿಕ್ ಇದ್ದಂಗೆ ಕಂಡದೆ. ಈ ಕತೆನ ನಾಯಕಗೊಲ್ಲ ಗೋಪಾಲ ಗೌಡ ಒಬ್ಬ ದನ ಕಾಯುಂವ. ಅವಂದ್ ಗ್ರಾಮ್ಯ ಭಾಷೆ ಆದ ಕಾರಣ ಅರೆಬಾಸೆ ಈ ಕತೆಗೆ ಕನ್ನಡಂದೊಳೂ ಲಾಯಿಕ್ ಹೋಲಿಕೆ ಆದೆ. ಪುಣ್ಯಕೋಟಿ ಕತೆ ಒಂದು ಹಳ್ಳಿನ ಕತೆ. ಅದ್ ನಗರದ ಆಧುನಿಕತೆನ ಪ್ರತಿಬಿಂಬಿಸುವ ವಸ್ತ್ ಅಲ್ಲ. ಹೆಬ್ಬುಲಿ ಅಂತ ಹೇಳ್ವಕ್ಕೆ ಬದಲಾಗಿ ಅಡ್ಡಗೆರೆನ ಪಟ್ಟೆ ಬಲಿಪ ಹೆಚ್ಚು ಪರಿಣಾಮಕಾರಿ ಆಗುಟ್ಟು.

ಓದುಗರ ಅಭಿಪ್ರಾಯಕ್ಕೆ ಯಾಗೋಳೂ ಜಾಗೆ ಉಟ್ಟು. ನನ್ನ ಗಮನಕ್ಕೆ ಬಾರದೆ ಬುಟ್ಟು ಹೋದ ನಾಟಕ, ರೂಪಕ ಇದ್ದರೆ ದಯಮಾಡಿ ಹೇಳೊಕು. ಮುಂದೆನ ದಿನಗಳ್ಲಿ ಸರಿ ಮಾಡಿಕಣೆ.

✍ ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು
ಪೊಂಪೈ ಕಾಲೇಜು, ಮಂಗಳೂರು. ಮೊ. : 9448216070

# ‘ಪುಂಸ್ತ್ರೀ’ ಕೃತಿಯ ಪರಿಚಯ

ಮಹಾಭಾರತ ಆಧಾರಂದ ಬರದ ಪ್ರಸಿದ್ಧ ಕಾದಂಬರಿ ‘ಪುಂಸ್ತ್ರೀ’ ಅರೆಭಾಷೆಗೆ ಬಂದಿದ್ದು ಎಲ್ಲವು ಹೊಗಳುವಂತ ಕೆಲ್ಸನೆ ಆಗಿಟು. ಇದರ ಕೀರ್ತಿ ಸೇರಕಾದ್ ಅರೆಭಾಷೆನ ಗುರ್ತುಸುವಂತ ಸಾಹಿತಿಯಾದ ಎಂ.ಜಿ. ಕಾವೇರಮ್ಮನವ್ಕೆ. ಡಾ. ಪ್ರಭಾಕರ ಶಿಶಿಲರ ಮೂಲ ಕೃತಿನ ಅದೇ ಸಂವೇದನೆಲಿ ಅನುವಾದ ಮಾಡ್ದ್ ಇವರ ಹೆಗ್ಗಳಿಕೆ. ಏಕಂತ ಹೇಳ್ರೆ ಇದೊಂದ್ ಸುದ್ಧವಾದ ಪೌರಾಣಿಕ ಕಾದಂಬರಿ ಇದರ ಪಾತ್ರಗ. ವಸ್ತುಗ. ಶಬ್ದ ಎಲ್ಲವೂ ಅತಿ ಸುಲಭಲಿ ಅರೆಭಾಷೆಗೆ ದಕ್ಕುವಂತ ಕಾದಂಬರಿ ಅಲ್ಲ. ಅಂತದ್ರಲ್ಲಿ ಇಂಥ ಕ್ಲಿಷ್ಟತೆನ ಸವಾಲಾಗಿ ತಕಂಡ ಅರೆಭಾಷೆಗೊಂದ್ ಗರಿ ಮೂಡಿಸ್ಯೊಳ. ಅರೆಭಾಷಿಕರ್ ಹೆಚ್ಚಿನವ್ ಕೇಳದೆ ಇರ್ವ ಅಪ್ರೂಪದ ಶಬ್ದಗ ಇದರ್ಲಿ ಸುಮಾರ್ ಉಟ್ಟು. ಒಟ್ಟಲ್ಲಿ ಅರೆಭಾಷೆಗೊಂದ್ ಅಪೂರ್ವ ಕಾದಂಬರಿ ಇದ್.

‘ಪುಂಸ್ತ್ರೀ’ ಎಂಬ ಹೆಸರ್‌ನ ಅರ್ಥ ರಹಸ್ಯ ಎಂತಾಗಿರ್ದು ಎಂಬ ಕುತೂಹಲ ಎಲ್ಲವ್ರಕೆ ಇರುವಂತದ್. ‘ಪುಂ’ ಅಂತ ಹೇಳ್ರೆ ಪುಲ್ಲಿಂಗ. ಅದ್ ಭೀಷ್ಮ. ‘ಸ್ತ್ರೀ’ ಅಂತ ಹೇಳ್ರೆ ಸ್ತ್ರೀಲಿಂಗ. ಅದ್ ಅಂಬೆ. ಈ ದೃಷ್ಟಿಕೋನಂದ ಮೂಲ ಲೇಖಕರ್ ಇಂತ ಅಪ್ರೂಪದ ಶಬ್ದವೊಂದರ ಸೃಷ್ಟಿ ಮಾಡಿ ಕಾದಂಬರಿಗೆ ಹೆಸರಸ್ಯೊಳ. ಈ ಕಾದಂಬರಿಲಿ ಮುಖ್ಯ ಪಾತ್ರಲಿ ಭೀಷ್ಮ ಮತ್ತೆ ಅಂಬೆ ಪಾತ್ರಗ ಬಳ. ಅಂಬೆನ ಮೇಲೆ ಅನುಕಂಪ ತೋರ್ಸ ಹಾದಿಲಿ ನಡ್ದರು ಸ್ತ್ರೀವಾದಿ ನೆಲೆಲಿ ಈ ಕಾದಂಬರಿ ನಿತ್ತದೆ ಅಂತ ಹೇಳಕಾದ್ಲ. ಅಂಬೆಗೆ. ಭೀಷ್ಮಂದ ಅವಮಾನ ಆದ ಮೇಲೆ ಅವನ ಕೊಲ್ಲುದು ನಾನಂತೇಳುವ ಪ್ರತಿಜ್ಞೆನ ಅಂಬೆ ಮಾಡ್ತ್. ಹಂಗೆ ಅವ್ಳು ಸತ್ತ್ ಪುರ್‌ಜನ್ಮಲಿ ಶಿಖಂಡಿಯಾಗಿ ಹುಟ್ಟಿ ಅವಳ್ ಹೊಡೆವ ಬಾಣಲಿಯೆ ಭೀಷ್ಮ ಕೊನೆಗೆ ಸತ್ತದೆ. ಇದರೊಂದಿಗೆ ಕಾದಂಬರಿ ಇನ್ನ್ ಹಲವಾರ್ ಪಾತ್ರಗಳಿಗೆ ಬತ್ತು ಕೊಟ್ಟದೆ. ಹೆಚ್ಚಿಗೆ ಗಣನೆಗೆ ಬರ್ವ ಪಾತ್ರಗ ಕೃಷ್ಣ. ಕರ್ಣಂದ್. ಪಾಂಡವರ್. ದುರ್ಯೋಧನ. ದ್ರೌಪತಿ ದ್ರೋಣ ಮುಂತಾದವ್ ಬಂದವೆ.

ಪುರಾಣದ ಕತೆಗಳ್ನ ಓದ್ದ ಅನುಭವನ ದಕ್ಕಿಸಿಕಂಡೊದೆ ರಸದೌತಣ ಇದ್ದ ಹಂಗೆ. ಯಾವ್ಯಾವ ಮೂಲೆಂದ ಹೆಂಗೆಲ್ಲ ಬಾಗಿಲ್ ತೆರ್ಕಂಡದೇ ಅಂತ ಗೊತ್ತಾಗದಂಗೆನೆ ಇಲ್ಲಿ ಕತೆಗಳ ಬಾಗಿಲ್ ತೆರ್ಕಂಡದೆ. ಆಕೇರಿಗೆ ಎಲ್ಲ ಸೇರಿ ಗಮ್ಮ ಸೇರಿಕಂಡದೆ. ಹಂಗೆನೆ ಇಲ್ಲಿನ ಪುಂಸ್ತ್ರೀ ಕಾದಂಬರಿ ನೆಲೆ ನಿಂತುಟು. ಕಾದಂಬರಿ ಬಗ್ಗೆ ಹೇಳ್ದೊದಾದರೆ ಇದೊಂದು ಮಹಾಭಾರತದ ಭಾಗ ಆದರೂ ಇದರ್ಲಿ ಪರಿಪೂರ್ಣತೆ ಉಟ್ಟು. ತುಂಬಾ ಅಧ್ಯಯನ ಮಾಡ್ತಿ ಬರ್ದಂಗೆ ತೋರುವ ಈ ಕಾದಂಬರಿ ಸಾಹಿತ್ಯ ಕ್ಷೇತ್ರಕ್ಕೆ ಉತ್ತಮ ಉಡುಗೊರೆ.

‘ಜೀವನ ಸಾಕೆನಿಸಿಕಾನ ಆತ್ಮಹತ್ಯೆ ಮಾಡಿಕಂಬದೆ ಸಾಯಿಕೆ ಸಾಧ್ಯ ಇದ್ದಿದರೆ ಎಷ್ಟ್ ಒಳ್ಳೆದಿತ್ತ್’ ಇಂತ ಅತ್ಯುತ್ತಮ ಸಾಲ್‌ಗ ಕಾದಂಬರಿಲಿ ಸಾಕಷ್ಟ್ ಸಿಕ್ಕುವೆ. ಕಾದಂಬರಿನುದ್ದಕ್ಕುನ ಕುರುಕ್ಷೇತ್ರಕೆ ಸಂಬಂಧಪಟ್ಟ ಒಳವಿಚಾರಗ ಆದ ಧರ್ಮ ಮತ್ತೆ ಅಧರ್ಮದ ನಡುವಿನ ಸಮರನ ಬೇರೆ ಬೇರೆ ಕೋನಗಳ್‌ಂದ ಚಿತ್ರಿಸುತ್ತ ಹೋದವೆ. ಗಂಭೀರವಾದ. ಜಗಳಗ. ಹಾಸ್ಯಗನ ನಮ್ಮ ಸೆಳ್ದವೆ.

ಎಲ್ಲಾರ್ ಭೀಷ್ಮ ಅಂಬೆನ ಮೊದ್ವೆ ಆಗಿದ್ದರೆ ಕಾದಂಬರಿ ಬೇರೆನೆ ಆಯಾಮ ಪಡ್ಕಣ್‌ಕ್ರಿತ್ತ್ ಎಂಬ ಪಿಚಾರನ ಇದರ ಓದಿಕಾನ ನಾವ್ರುಗೆ ಬಂದದೆ. ಏಕೆಂತ ಹೇಳ್ರೆ ಇದೇ ಪಿಚಾರಕೆ ಇಲ್ಲಿ ಮಹತ್ವ ಕೊಟ್ಟದರಂದ ಮಹಾಭಾರತದ ಒಂದು ತುಂಡು ಇಷ್ಟ್ ದೊಡ್ಡ ಕಾದಂಬರಿಯಾಗಿ ಹೊರಹೊಮ್ಮಿಟು ಎಂಬುದೆ ನಾವ್ರುಗೆ ಆಶ್ಚರ್ಯ ಕೊಟ್ಟದೆ. ಈ ನಿಟ್ಟ್‌ಲಿ ನೋಡಿಕಾನ ಕಾದಂಬರಿಕಾರರ ಸೃಜನಶೀಲತೆ ನಮ್ಮ ಸೆಳ್ದದೆ. ಇದರ ಬಗ್ಗೆ ಚರ್ಚಿಸಿಕೆ ಹೊರ್ಟರೆ ಸುಮಾರ್ ಆರೋಗ್ಯಕರ ಚರ್ಚೆಗಳ್ನ ಹುಟ್ಟುಹಾಕುವಂತಹ ಕಾದಂಬರಿ. ಇದ್ ಮಹಾಭಾರತಕ್ಕೆ ಹೊಸ ಆಲೋಚನೆಗಳ ಕೊಟ್ಟುಟು. ಸಮರಲಿ ಸಂಬಂಧಗಳ ಬಗ್ಗೆ ಯೋಚಿಸಿಕೆ ಆಗದ್ ಎಂಬ ವ್ಯಾಖ್ಯಾನ ಮತ್ತೆ ಇಚ್ಛಾಮರಣಿಯಾದ ಭೀಷ್ಮ ಕೊನೆಗೆ ಕೃಷ್ಣನ ಕೊಳಲ್‌ಗಾನ ಕೇಳಿಕಂಡ್ ಪ್ರಾಣ ಬುಡುವ ಸನ್ನಿವೇಶಗ ಕಾದಂಬರಿಲಿ ತುಂಬಾ ಮಾರ್ಮಿಕವಾಗಿ ಮೂಡಿ ಬಂದುಟು. ಕಾದಂಬರಿಲಿ ಬರ್ವ ಎಲ್ಲಾ ಪಾತ್ರಗಳಸ ಮನಸಿಗೊಪ್ಪುವಂಗೆ ಬರ್ದೊಳ. ಮೂಲ ಮಹಾಭಾರತದ ಅನಂತರ ಅದೆಷ್ಟೋ ಲೇಖಕರ್ ತಮ್ಮ ದೃಷ್ಟಕೋನದಂಗೆ ಅದೆಷ್ಟೋ ಪೌರಾಣಿಕ ಕಾದಂಬರಿಗಳ ಬರ್ದೊಳ. ಆದರೆ ಇಲ್ಲಿ ಲೇಖಕರ್ ಯಕ್ಷಗಾನದ ಹಿನ್ನಲೆ ಇದ್ದದರಂದ ಅಲ್ಲಿ ಕೇಳ್ದ ಕತೆಗಳ ಮೂಲಕ ಪಿಭಿನ್ನವಾಗಿ ಚಿಂತಿಸ್ಯೊಳ. ಪೌರಾಣಿಕ ಬರಹಗಳ ಬರಿಯದು ಖಂಡಿತ ಸುಲಭ ಇಲ್ಲೆ. ಕಾದಂಬರಿಲಿ ಏಕಲವ್ಯನಾಗಿ 'ಗಿರಿನಾಯಕ' ಎಂಬ ಪಾತ್ರ ತುಂಬಾ ಮನಸೆಳ್ದದೆ. ಮಹಾಭಾರತಲಿ ಮಹತ್ವ ಇದ್ದರು ಗಮನ್ನದ ಪಾತ್ರಂತ ಹೇಳ್ರೆ ಏಕಲವ್ಯಂದ್. ಕಾದಂಬರಿಲಿ ಏಕಲವ್ಯನಾದ ಗಿರಿನಾಯಕನ ಪಾತ್ರ ಗಮನಾರ್ಹ ಆಗಿ ಉಟ್ಟು. ಇಂತಹ ಪಾತ್ರಗಳಿಗೆಲ್ಲ ಜೀವ ಕೊಟ್ಟ್ ಇವರ ಮೂಲಕ ಮಹಾಭಾರತನ ನೋಡ್ವ ಮನೋಭಾವ ನಮ್ಮಲ್ಲಿ ಬೆಳ್ದದೆ. ಭೀಷ್ಮ ಮತ್ತೆ ಅಂಬೆಯರ ಮೂಲಕ ಹೊಸ ಓದುನೊಂದಿಗೆ ಇಲ್ಲಿನ ಕಾದಂಬರಿ ತೆರ್ಕಂಡದೆ.

ಈ ಅರೆಭಾಷೆ ಕಾದಂಬರಿನ ಅನುವಾದಕರಾದ ಎಂ.ಜಿ. ಕಾವೇರಮ್ಮನವ್ರು ಕೃತಿಲಿ ಅವರ ಮಾತ್‌ಲಿ ಹೇಳ್ವಂಗೆ, ಪೌರಾಣಿಕ ಕತೆಲಿ ಬರ್ವ ಶಬ್ದಗಳಿಗೆ ಅರೆಬಾಸೆಲಿ ಸರ್ಯಾದ ಶಬ್ದನ ಹುಡ್ಕುದು ಕಷ್ಟಾಂತ ಹೇಳ್ರುಸ. ಹಿಡ್ದ ಕೆಲ್ಸನ ಬುಡದೆ ಸಂಪೂರ್ಣ ಅನುವಾದ ಮಾಡ್ಯೊಳ. ಇವರ ಜೀವನೋತ್ಸಾಹ ನಾವೆಲ್ಲ ಮೆಚ್ಚುವಂತದ್ದ್. ಅನುವಾದ ಮಾಡ್ದು ಅತಿಯಾದ ಸಂಯಮ ಬೇಡ್ವ ಕೆಲಸ. ಕನ್ನಡಲಿ ಬರ್ದದರ ಅರೆಭಾಷೆಗೆ ಬರ್ದರೆ ಮುಗ್ತ್ ಅಂತ ನೆನ್ಸಿಕಂಡರೆ ಅದ್ ದೊಡ್ಡ ತಪ್ಪ್ ತಿಳುವಳ್ಕೆ. ಇಲ್ಲಿ ಕೇವಲ ಭಾಷಾನುವಾದ ಆದ್ಲೆ. ಭಾವಾನುವಾದ ಆಕಾದೆ. ಮತ್ತೆ ಎರಡ್ ಭಾಷೆಗಳ ಮೇಲೆ ಸಂಪೂರ್ಣ ಹಿಡ್ತ ಬೇಕಾದೆ. ಒಟ್ನಲ್ಲಿ ಕನ್ನಡಲಿ ಬರ್ದದರ ಸಹಜತೆನ ಹಾಂಗೆನೆ ಉಳ್ಸಿಕಂಡ್ 'ಪುಂಸ್ತ್ರೀ' ಮೂಡಿಬಂದುಟು. 'ಅಲ್ಲಿನ ಉಡುಗೆನ ಇಲ್ಲಿಗ ತೊಡಿಸಿ' ಎನ್ನುವಂಗೆ ಎಂ.ಜಿ. ಕಾವೇರಮ್ಮನವರು ಅರೆಭಾಷೆನ ಇನ್ನೂ ಚಂದಗಾಣಿಸ್ಯೊಳ.

✍ **ಸಂಗೀತ ರವಿರಾಜ್**
ಹೊಸೂರು, ಚೆಂಬು



**ಕವನ**

# ನಮನಃ

ಅವ್ವಾ–ಅವ್ವಾ–ಓ ನಮ್ಮವ್ವಾ
ನೀನ್ ಎಲ್ಲಿ ಹೆಂಗೆ ಇದ್ದಿಯಾಂತ ಒಮ್ಮೆ ಹೇಳವ್ವಾ
ನೀನ್ಯಾಕೆ ನಮ್ಮನ್ನೆಲ್ಲಾ ಬುಟ್ಟ್ ದೂರ ಹೋಗೇಬುಟ್ಟಲವ್ವಾ
ನೀನ್ ಎಲ್ಲಿದ್ದರೂ ಹೆಂಗಿದ್ದರೂ,
ಎಂದೂ ಸುಖ ಆಗೇ ಇರೊಕವ್ವಾ.
ನೀನ್ ಸದಾ ಸ್ವರ್ಗಲೇ ಇರಕೂಂತ ನಮ್ಮೆಲ್ಲರ ಆಸೆಯವ್ವಾ
ಅದ್‌ಕ್ಕಾಗಿ ನಾವೆಲ್ಲಾ ಬೇಡ್‌ವೆ ಆ ಭಗವಂತನವ್ವಾ॥
ಅಂದ್‌ಂದ ಇಂದ್‌ಗೆ ಮುಟ್ಟ ಒಮ್ಮೆನೂ ನೀನ್ ನಮ್ಮತ್ತರ ಬಾಕೇ ಇಲ್ಲವಲ್ಲವ್ವಾ
ಒಂದೊಮ್ಮೆ ನಮ್ಮೊಟ್ಟಿಗೆ ಮಾತಾಡಿ ಹೋಗೂಂತ ಬೇಡಿಕಂಡವೆ ನಿನ್ನ ಅವ್ವಾ
ಒಮ್ಮೆಯಾದರೂ ಬಂದ್ ನಮ್ಮ ಮುಚ್ಚಿದ ಕಣ್‌ಗಳ್ನ ಬಿಡಿಸಿ ಹೋಗವ್ವಾ॥
ನೀ ಪಟ್ಟ ಬೇನೆನ ನಾವ್ ನೋಡಿ–ನೋಡಿ ಸುಸ್ತಾಗಿ ಹೋಗಿದ್ದೇವವ್ವಾ
ಆ ಬೇನೆನ ನಿಂಗ್ಯಾರ್, ನಿಂಗ್ಯಾಕೆ ಕೊಟ್ರೊ ಆ ಪಾಪಿಗಳ್‌ಂತ ಒಮ್ಮೆ ಹೇಳವ್ವಾ
ಆ ಬೇನೆನ ನೀನ್ ತಿಂದ್–ತಿಂದ್ ಸೋತ್–ಸುಣ್ಣಾಗಿ ಹೋಗಿಯೇಬಿಟ್ಟಿಯಲ್ಲವ್ವಾ
ಅಂದ್ರೂ ನೀನ್ ಸುಖಿಲ್ಲೇ ಇದ್ದರೆ ಬದುಕುವೆ ನಾವೆಲ್ಲ ನಿನ್ನ ಸ್ಮರಣೆ ಮಾಡಿಕಂಡವ್ವ॥
ಅಂದ್ ತುಂಬಿದ್ದೆ ನೀನ್ ನಮ್ಮ ಮನೆನ
ಇಂದ್ ಬಂದ್ ನೋಡವ್ವಾ–ಎಲ್ಲಾ ಖಾಲಿ–ಖಾಲಿ ನಮ್ಮನೆ॥
ನೀನಾಗಿದ್ದೆ ಅಂದ್ ನಮ್ಮೆಲ್ಲರ ಬದ್ಕ್
ನೀನಾಗಿದ್ದೆ ಅಂದ್ ನಮ್ಮೆಲ್ಲರ ಬೆಳ್ಕ್॥
ಹಂಗನೇ ನೀನಾಗಿದ್ದೆ ನಮ್ಮೆಲ್ಲರ ಬಾಳಿಗೆ ತಣ್ಣನೆಯ ಉಸುರ್
ಹಂಗನೇ ನೀನಾಗಿದ್ದೆ ನಮ್ಮೆಲ್ಲರ ಬಾಳಿಗೆ ಹೊಸದೊಂದ್ ಚಿಗ್‌ರ್॥
ಅಂದ್ ನೀ ಕೊಟ್ಟ ಕಡಲಗಲದ ಪ್ರೀತಿ
ಅದೆಲ್ಲಿಟ್ಟು ಈಗ ನಮ್ಗ ಹೇಳುದೇ ನಮ್ಮೆಲ್ಲರವ ಭೀತಿ॥
ನಿಮಿಷ –ನಿಮಿಷಕೆ ಗಂಟೆ–ಗಂಟೆಗೆ, ದಿನ–ದಿನಕೆ
ನಿನ್ನ ಫೋಟೋ ನೋಡ್‌ತಾ–ನೋಡ್‌ತಾ ಕಣ್ಣೀರ್ ಹಾಕಿವೆ ನಾವೆಲ್ಲವ್ ಅವ್ವಾ
ಮತ್ತೊಮ್ಮೆ ನಿನ್ನ ಪ್ರೀತಿನ ನೀನ್ ಕೊಟ್ಟನೇಂತ ಹೇಳ್‌ದ್ರಷ್ಟೇ ಸಾಕವ್ವ.
ಬಂದ ಬಂದ್‌ಗಳೆಲ್ಲಾ ಕೇಳುವೆ ಅವ್ವ ಎಲ್ಲಿಂತೇಳಿ
ಬಂದ ಮಿತ್ರರೆಲ್ಲಾ ಹುಡುಕಿವೆ ಅವ್ವ ಎಲ್ಲಿಂತೇಳಿ
ಇವ್ಕೆಲ್ಲಾ ನಾನೇನ್ ಹೇಳ್ಲಿ ನೀನೇ ಹೇಳವ್ವಾ॥
ನೀನ್ ಯಾಗ ಬಂದಿಯಾ ನಮ್ಮಲ್ಲಿಗೆ ಹೇಳವ್ವಾ
ಅಂದ್ ನಾವೆಲ್ಲಾ ಕಾದವೆ ನಿಂಗೆ ನಮಿಸಿಕೆ
ಅಂದೇ ನಮ್ಮೆಲ್ಲಾ ಸ್ವರ್ಗ–ಸ್ವರ್ಗ–ಸ್ವರ್ಗ॥
ಅವ್ವಾ–ಅವ್ವಾ–ಓ ಅವ್ವಾ ನಿಂಗೊಮ್ಮೆ ನಮ್ಮೆಲ್ಲರ ನಮನ–ನಮನ–ನಮನ

✍ **ಕಾವೇರಿಮನೆ ಡಾ॥ ಬೋಜಪ್ಪ, ಬೆಂಗಳೂರು, ಮೊ. : 9738450971**



# ಕೊರೋನಾ

ಕೊರೋನಾ ಮಹಾ ಮಾರಿ ರೋಗ
ಹಬ್ಬಿದೆ ಪ್ರಪಂಚಲಿ ಬಾರಿ ಬೇಗ
ಕಾರಣ ಗೊತ್ತಿಲ್ಲೆ ಏನ್‌ಂತ ಈಗ
ಹಿಡೆದುಲ್ಲೆ ಇದ್ಕೆ ಈಗನಾ ಮೊದ್ದುಗ
ರಾಸಿ ಬಿದ್ದವೆ ದೇಸ ವಿದೇಸಲಿ ಹೆಣಗ
ಹಕ್ಕಲೆ ಹೋಕ್ಕಿಲ್ಲೆ ನೋಡ್ಕೆ ಬಂದುಗ
ಮಾಡ್ವೆ ಪ್ರಯತ್ನ ತಡೆಕೆ ಈ ಹೊಸ ರೋಗ
ಸಿಕ್ಕಿತಿಲ್ಲೆ ಇನ್ನೂ ಸರಿಯಾದ ಮೊದ್ದುಗ
ಇದಿಕಿಲ್ಲೆ ಬಡಂವ ದೊಡ್ಡಂವ ಜಾತಿ ಪಾತಿಗ
ಶ್ರೀಮಂತ ದೇಸಗ ಸೋತು ಹೋಗೊಳೊ ಈಗ
ಮಾಡ್ವೆ ಆರೋಪ ತಮ್ಮೊಳಗೆ ಈ ದೇಸಗ
ದಿಕ್ಕ್ ಕಾಂಬೊದಿಲ್ಲೆ ಏನ್ ಮಾಡೊಕು ಈಗ
ಹೆದ್ರಿಕೆ ಹಿಡ್ದುಟು ಹಂಗೆ ಜಿಳ್ದದೆ ನಮ್ಮ ಜೀವಗ
ಸರ್ಕಾರ ಹೇಳ್ದೆ ಬೇಡ ಹೆದ್ರಿಕೆ ಬಯಗ
ಕಾಂಬೊದಿಲ್ಲೆ ಯಾರಿಗೂ ದೈರವ ಸರಿದಾರಿಗ
ಪ್ರಾರ್ಥನೆ ಮಾಡ್ವೆ ಈಗ ಮಾಡೋಕು ಸಾಯ ದೇವ್ರ್‌ಗ
ಸಿಸ್ತಿನ ಜೀವನ ಕಲೆಕು ನಮ್ಮ ಜನಗ
ಆಗ ನಡ್ದದೆ ನಮ್ಮ ಜೀವನ ಸರಾಗ.

✍ ಕುಂಞೇಟಿ ಶಿವರಾಮಗೌಡ
ಕಲ್ಲಮೊಗ್ರ, ಸುಳ್ಯ. ಮೊ. : 8762121694

# ಒಪ್ಪಿರೆ ನೀವು?

ಮಕ್ಕಳಿಗು ದೊಡ್ಡವ್ರಿಕು ಬೇಸಿಗೆ ರಜ ಬಾಕನ ಎಷ್ಟ್ ಕುಸಿ।
ಅವ್ವ ತಾತನ ಮನೆಗೆ ಹೋಕೆ ಬಟ್ಟೆ ಶೂ ಚಪ್ಪಲ್ ರೆಡಿ॥

ತ್ವಾಟಕ್ಕ. ಗದ್ದೆಗೆ ಓಡಿಕೆ। ಕ್ರಿಕೆಟ್ ಮ್ಯಾಚ್ ನೋಡಿಕೆ
ತಯಾರಾಗ್ತಿದ್ದೊ॥ ಎಲ್ಲಾ ಮನೆ ಮಕ್ಕಳ ಕತೆನೂ ಹಿಂಗೆ॥

ಕೊಡ್ಗ್‌ತೇಳ್ದು ಅದೊಂದು ರೋಮಾಂಚನ ಶಬ್ದ।
ಮಡಿಕೇರಿಲಿ ರಾಜಾಸೀಟ್‌ಲಿ ನಿತ್ತ್ ದೂರದ ಬೆಟ್ಟಗಳ್‌ನ ನೋಡ್ದು॥

ಓಂಕಾರೇಶ್ವರ ದೇವರ ಕೆರೆಲಿ ಮೀನ್‌ಗ ಸಾಲ್‌ಕಟ್ಟೆ ಬಾದು।
ನೆಂಟ್ರ ಮನೆಗ ಹೋದು। ಒಳಗೆಂದ ಚೊಂಬುಲಿ ನೀರ್ ತಾದು॥

ಕಾಲ್ ಮುಟ್ಟಿ ನಮಸ್ಕಾರ ಮಾಡ್ದು। ಮೊದುವೆಲಿ ಶಾಸ್ತ್ರ ಮಾಡ್ದು।
ವಾದ್ಯಕೆ ಕೋಣಿಯೊದು, ಜನ ಕಳ್ಳ್ ಕುಡಿವ ಸ್ಟೈಲೇ ಸ್ಪೆಶಲ್ !!

ಪೋರ್ಕ್‌ಕರಿ+ಅಕ್ಕಿರೊಟ್ಟಿ, ಚಿಕನ್‌ಕರಿ+ಕಡಂಬಿಟ್ಟ್
ಕರಿಕಾಫಿ ಬೈನೆ ಕಳ್ಳ್ ಎಲ್ಲವೂ ಒಪ್ಪುವ ರುಚಿ॥

ಬೆಟ್ಟಕೊಡಿಂದ ಮಳೆಗಾಲ ರಬಸಾಗಿ ಬೀಳುವ ಜಲಪಾತಗ
ಪಾಚಿ ಹಿಡ್‌ದ್ ಜಾರುವ ಪಾರೆಕಲ್ಲ್‌ಗಳೊ ಕೈ ಬುಟ್ಟರೆ ಪಾತಾಳಕೆ॥

ಇನ್ನ್ ಮಳೆಗಾಲ ಮಳೆನೊ। ಚಳಿನೊ ಸ್ವೆಟರ್‌ಲಿ ನಡ್‌ಗುವೆ।
ಆ ಉಂಬುಳು ಗ್ಯಾನ ಮಾಡ್ರೆ ಹೆದ್ರಿಕೆ ಆದೆ॥

ಅದೆಲ್ಲಕ್ಕಿಂತ ಜ್ಯಾಸ್ತಿ ಹೆದ್ರಿಕೆ ನಂಗೆ ಗ್ವಾಡೆಲಿ ಓಡುವ ಹಲ್ಲಿನ ಕಂಡರೆ
ತೇಳ್ದವ್ರು ಹೊರಗೆಂದ ಮನೆಗೆ ಬಂದ ಪ್ರವಾಸಿಗರ್.

✍ ಬೈತಡ್ಕ ಜಾನಕಿ ಬೆಳ್ಯಪ್ಪ

## ಮುಖಪುಟ ಚಿತ್ರದ ಪರಿಚಯ

# ಕನ್ನಿಕಂಬ

ಅರೆಬಾಸೆ ಮತ್ತೆ ತುಳು ಬಾಸೆ ಮಾತಾಡ್ವ ಗೌಡರ್ಗ ಇರುವ ಕನ್ನಡ ಜಿಲ್ಲೆ, ಕೊಡಗ್ ಜಿಲ್ಲೆ, ಕಾಸರಗೋಡ್ ಜಿಲ್ಲೆಲಿ ಅವರ್ದೆ ಅದ ಬಾಸೆ, ಕುಣಿತ, ವಾಸ್ತುಸಿಲ್ಪ, ಇತಿಹಾಸ, ಆಚರಣೆ, ಆರಾದನೆ. ಮಾಡಿಕಂಡ್ ತಮ್ಮತನನ (identity) ಉಳ್ಸಿಕಂಡ್ ಬೊಪ್ಪತ ಒಳೊ. ಅವರ ಹೆಚ್ಚಿನ ಕ್ರಮಗ ಸುರು ಅದ್ ಅಡ್ಗೆ ಕೋಣೆಲಿರ್ವ ಒಂದ್ ಮರಂದ ಮಾಡ್ದ ಕಂಬದ ರಚನೆಂದ ಅದ್ಕೆ "ಕನ್ನಿಕಂಬ" ತೇಳಿ ಕರ್ದವೆ. ಅದರ ಕನ್ನಿಕಂಬ, ಕನ್ನೆಕಂಬ, ಮೂರ್ತದ ಕಂಬ, ಕನ್ಯಾಕಂಬ, ಕನ್ನಿಕೋಂಬರೆಂತೇಳಿ ಸಾ ಕರ್ದವೆ. ಇದ್ ಅಡ್ಗೆ ಕೋಣೆಲಿ, ಕೆಲವ್ ಮನೆಲಿ ದೆವ್ವದ **ಕೋಣೆ** ಅತವಾ ದೇವರ ಕೋಣೆಲಿಸೂ ಇದ್ದದೆ.

ಕನ್ಯಾಕಂಬ ಮನೆನ/ಕೋಣೆನ ಆಗ್ನೇಯ, ಈಸಾನ್ಯ **ಬಾಗಲಿ** ಜಾಸ್ತಿ ಕಾಂಬಕೆ ಸಿಕ್ಕಿದೆ. ಇದಕ್ಕೆ ಕನ್ಯಾಮೂಲೆ/ಕನ್ನೆಮೂಲೆಂತ ಕರ್ದವೆ. ಕನ್ಯಾ ಮೂಲೆಲಿ ಅಂದರೆ ಗಂಡ-ಹೆಣ್ಣ್ ಮಲ್ಗುವ ಕೋಣೆನ ಮೂಲೆ ಅಂತ ಲೆಕ್ಕ ಸುಲಬಲಿ ಅರ್ತ ಆಕಾರ್. ಅಚಾರಿನ ಲೆಕ್ಕಲಿ ಸುಮಾರ್ ಮುಕ್ಕಾಲ್ ಕೋಲುಂದ ಹೆಚ್ಚಿ ಇದ್ದ್ ನೆಲಂದ ಮೇಲೆ ಕಾಂಬ ಮರದ ಕೆತ್ತನೆ ಇದ್. ಎರಡ್ ಕೈಂದ ಹಿಡಿವಂಗೆ ದಪ್ಪ ಆಗಿದ್ದವೆ. ಅಸ್ಟ ಪಟ್ಟಿ, ಚೌಕ ಪಟ್ಟಿ ಬರುವಂಗೆ ಇದ್ದ್ ಕಂಬದ ಕೊಡಿ ದೂಂಬಿ ಆಗಿದ್ದ್ ನೋಡಿಕೆ ಮುಗುಳಿ, ಗೋಪುರದ ಹಂಗೆ ಇದ್ದದೆ. ಕನ್ನಿಕಂಬದ ಪುಡೆಲಿ ಎಂಟ್ ಪಟ್ಟಿ ಇದ್ದದೆ. ಇದ್ ಅಸ್ಟ ದಿಕ್ಕ್‌ಗಳ ಸಂಬಂದ ಕೂಡ ಅಗಿರುದು. ಪುಡೆಂದ ನೋಡಿರೆ ನಾಮದಂಗೂ ಕಂಡದೆ. ಇದರ ಹಾಲು ಬರ್ವ ಗಟ್ಟಿ ಮರಂದ ಮಾಡ್ತೆ, ಹೆಚ್ಚಿನ ಕಡೆ ಹಲ್ಸಿನ ಮರದ್ದೆ ಆಗಿದ್ದದೆ. ಕುಟುಂಬದ ಮನೆ, ದೊಡ್ಡ ಮನೆ, ಐನ್ ಮನೆಲಿ,ಗುತ್ತು, ಬಾರಿಕೆ ಮನೆಗಳಲ್ಲಿ ಸಾಮಾನ್ಯ ಇರುವಂತದ್. ಐನ್ ಮನೆನ ಕೈಸಾಲೆ ತೊಕ್ಕಕನ ಎದ್ದ್



ಏರ್ವ ಕಂಬ. ಕೊಡವರ ಪೂಜೆನ ಕೋಣೆ ಮೀದಿ ಕೋಂಬರೆ/ದೇವಡ ಕೋಂಬರೆಲಿ ಕನ್ನಿಕಂಬ ಅತವಾ ಕನ್ನಿಕೋಂಬರೆ ಇದ್ದದೆ.

ಕನ್ನಿ ಕಂಬನ ಮನೆ ಒಕ್ಕಲ್ ಮಾಡ್ವ ಹಿಂದೆನ ದಿನ ಅಂದರೆ ಕುಟ್ಟಿ ಪೂಜೆ/ಕುತ್ತಿ ಪೂಜೆ/ ಗುತ್ತಿಪೂಜೆ/ ಹಿಂದುನ ದಿನ ಹಿಂಬೊತ್ತು ಕತ್ತಲೆಗೆ ಮಾಡ್ವ ಕ್ರಮಗಳ ಒಟ್ಟಿಗೆ ಅಷ್ಟ ಕೋಣೆನ ಆಗ್ನೇಯ/ ಇಸಾನ್ಯ ದಿಕ್ಕ್‌ಲಿ ಹಾಕ್ವೆ. ಮನೆ ಕೆಲ್ಸ ಮಾಡ್ವ ಆಚಾರಿ ಮನೆಯ ಯಜಮಾನನೊಟ್ಟಿಗೆ ಸೇರಿ ಮೊಣ್ಣೊಳಗೆ ಹಾಕ್ವೆ. ಆ ಗುಂಡಿಲಿ ಅರ್ಸಿನಲಿ ಕಲ್ಸಿದ ಬೆಳ್ತಕ್ಕಿ, ತೋಳ್‌ಕೊಡಿ, ನಾಕಾಣೆ ದುಡ್ಡು, ಒಟ್ಟಿಗೆ ಪಂಚಲೋಹದ ಮುರ್ಕ್ನ ಬೆಚ್ಚಾಗಿ ಚೆನ್ನ/ಬೆಳ್ಳಿಯ ಮುರ್ಕು ಹಾಕಿ, ಹಾಲ್ ತುಪ್ಪ ಹೊಯ್ದ್ ಅದರ ಮೇಲೆ ಈ ಕನ್ನಕಂಬನ ಮೇಲೆ ಬಿಳಿ ಬಟ್ಟೆನ ಹೊದ್ಸಿ ಇಸಿ ಬುಡ ಗಟ್ಟಿ ಮಾಡ್ವೆ. ಮನೆ ಕೆಲ್ಸ ಮಾಡಿದ ಆಚಾರಿಯು ಈ ಕ್ರಮಗಳ ಮತ್ತೆ ಕ್ರಿಯಾಚಾರಣೆಗಳ ಮಾಡುವೆ. ಇಲ್ಲಿ ಆಚಾರಿಗೆ ಕೊಡುವ ಮೊಯ್ರ್ಯಾದಿ ಮೊದ್ಲೆಯ ದಿನ ಮುಕ್ಕಾರ್ ತೋರಣಕ್ಕೆ ಕೊಟ್ಟ ಮೊಯ್ರ್ಯಾದಿನೊಟ್ಟಿಗೆ ಕನ್ನ ಕಂಬಕ್ಕೆ ಹೊದ್ಸಿದ್ದ ಬಟ್ಟೆನೂ ಕೊಡೋಕು. ಒಂದು ಸೇರ್ ಅಕ್ಕಿ, ನಾಕಾಣೆ ದುಡ್ಡು, ಒಂದು ಕಾಯಿ ಐದ್ ಎಲೆ ಒಂದು ಅಡ್ಕೆ ಆಚಾರಿಗೆ ಕೊಡುವ ಮೊಯ್ರ್ಯಾದಿ. ಹಾಂಗೆ ಆಚಾರಿನ ಮುಕ್ಕಾರ್ ತೋರಣ ಮತ್ತೆ ಮನೆ ಒಕ್ಕಲುನ ಹೇಳಿಕೆ ಒಟ್ಟಿಗೆ ಕನ್ನೇಕಂಬ ನೆಡುವ ಬಗ್ಗನೂ ಹೇಳಿಕೆ ಕೊಟ್ಟು ಮಾತಾಡ್ಸಿ ಬರೋಕು ಮನೆ ಯಜಮಾನ ಅದವ. ಮುಕ್ಕಾರ್ ತೋರಣ ತೇಳಿರೆ ಎಲ್ಲ ಗೌಡ್ರ ಮನೆ ಒಕ್ಕಲಿನಂದ್ ಮತ್ತೆ ಮದ್ವೆಯ ಹಿಂದಿನ ದಿನ ಮನೆನ ಎದ್ರಿನ ಮಾಡಿನ ಮೇಲೆ ಇಸಿಕೆ ಮೂರ್ ಕಾಲಿನ ಮರಂದ ಮಾಡುವ ಅಕಾರಲಿ ಇರುವ ರಚನೆ ಆಗಿದ್ದದೆ. ನೋಡಿಕೆ ತ್ರಿಸೂಲಿನ ತಿರ್‌ಗಿಸಿ ಹಿಡಿದ್ ಮೂರು ಅಂತಸ್ತಿನಂಗೆ ಕಂಡದೆ. ಪವಿತ್ರಂತೇಳುವ ನೆಲೆಲಿ ಇದ್ ಪ್ರತಿ ಮನೆಲೂ ಇದ್ದದೆ.

ಕನ್ನಿಂತೇಳಿರೆ ಸಣ್ಣದು, ಕುಂಞಂತೇಳುವ ಅರ್ತ ಕೂಡ ಆಗಿದ್ದೂ. ಬೊಯ್ನ ಜಾತಿನ ಮರದ ಕಾಯಿನ ಜೊಂಗೆನ ಸುತ್ತ ನೇಲುವ ಗಟ್ಟಿ ಬೊಳ್ಳೆಗೆ ಕೂಡ ಕನ್ನಿ ಬೊಳ್ಳಂತ ಕರ್ದವೆ. ಕನ್ನಿನೆಲತೇಳ್ರೆ ಕ್ರಿಸಿ ಮಾಡದ ಬೂಮಿ. ಕನ್ನಿಪೊಣ್ಣು, ಕನ್ನಿಕೆ, ಕನ್ಯಕಾ, ಕನ್ಯಂತೇಳಿ ಮೊದ್ವೆ ಆಗದ ಸಣ್ಣ ಪ್ರಾಯದ ಗೂಡೆನ ಕರ್ದವೆ. ಹಾಂಗಾಗಿ ಕನ್ನಿಕಂಬ ಅಂತೇಳ್ದು ಕನ್ಯ, ಮನೆ ಹೆಂಗ್ಸ ಸಂಬಂದಪಟ್ಟ ನಂಬಿಕೆನ ಕಾರಣ ಕೂಡ ಆಗಿದ್ದೂ. ಹಿಂಗೆ ಬೇರೆ ಬಾಸೆಲಿ ಕೂಡ ಪ್ರಯೋಗ ಉಟ್ಟು. ತಮಿಳಿಲ್ಲಿ ಕನ್ನಿ ಅಂತ ಹೇಳ್ರೆ ಸುದ್ದ(Pure), ಶ್ರೇಷ್ಟ, ಪೂಜ್ಯ ಹಂಗೆನೆ ಅಲ್ಲಿ ಒಂದು ಜಾತಿಯ ನಾಯಿಯ ತಳಿನ ಹೆಸರ್‌ನೂ ಉಟ್ಟು. ಹಿಂದೆ ಗೂಡೆನ ಮೊದ್ವೆ ಮಾಡಿಕೊಡಿಕನ ಒಂದು ಈ ಜಾತಿನ ನಾಯಿನ ಕೂಡ ಕೊಡುತಿದ್ದೊ ಅಂತ ಕತೆಗ ಒಳೋ. ಮೇಲಿನ ವಿವರಗಳಿಂದ ಕನ್ನಿಕಂಬೊ ಕೂಡ ಅದೇ ನಮೂನೆನ ಅರ್ತ ಕೊಟ್ಟದೆ ಮರದ ಸಣ್ಣ ಕೊದಂಟ. ಮೂಹೂರ್ತ, ಸುದ್ದಾಚಾರಣೆ ಹೆಣ್ಣ್ ಹೆಂಗ್ಸ ಗೆ ಸಂಬಂದ ಪಟ್ಟಂಗೆ ಆಗಿರುದು.

ಕನ್ನಕಂಬ ಒಂದ್ ಪವಿತ್ರವಾದ ಕಂಬ. ಹಿರಿಯವು ದೇವರ ಕಲ್ಪನೆ ಇಲ್ಲದ ಸಮಯಲಿ ಸಕ್ತಿಯ ಅರಾಧನೆಯ ನೆಲೆಲಿ ಈ ಕಂಬದ ಹಕ್ಕಲೆನೆ ಎಲ್ಲ ಕ್ರಮಗಳ ಮಾಡ್ತಿದ್ದೊ. ಅದು ಮೊನ್ನನ ಬೊದ್ಕನ ದಿನದ ಮತ್ತೆ ವರ್ಸದ ಆಚರಣೆಗಳಲ್ಲಿ

ಎಲ್ಲೊವು ಬಂದ್ ಸೇರ್ತಿದ್ದೊ. ಅದ್ ದೆವ್ವದ ಅಗೆಲ್ ಹಾಕಿಕೆ, ಕೋಲೆಗೆ ಅಗೆಲು ಇಸಿಕೆ(ಕಾರ್ನೂರುಗ ಇಸಿಕೆ), ಕೊಟ್ಟ ಹೆಣ್ಮಕ್ಕ ತೌರು ಮನೆಗೆ ಬಂದ್ ಹೋಕಾಕನ(ಸಮ್ಮಾನ ಮಾಡಿಕನ), ಅವು ಹೋವ ಹಿಂದೆನ ಇರ್ಳ್ ಕಲ್ಲುರ್ಟಿಗೆ ಎಡೆಯಿಕ್ಕಿ ದೀಪ ಹೋಸಿ. ಜಿನ್ನ ಹೇಳಿ, ಅಕ್ಕಿ ಹಾಕಿ ಕೈ ಮುಗ್ಯುದು, ಕುಸಿನ ಜಂಬರ ಮಾಡಿಕನ ಕೈ ಮುಗ್ಯುದು. ಗಣಪತಿಗೆ ಇಸುವುದು, ಸಂಕ್ರಮಣದ ಅಡುಗೆ, ಮಾಂಸದ ಅಡಿಗೆ ಮಾಡಿರೆ ಹೊಸಗೆಯಕ್ಕಲೆ ಇಸುದು(ಜೆಸೆಗೆಲಿ ಇಸುದು), ಕದಿರು ಕಟ್ಟುದು, ಕಾರ್ತಿಂಗ ಹರ್ಕೆ, ಗುರು ಕಾರ್ನೋರಿಗೆ ಇಸುದು, ತಿರುಪತಿ ತಿಮ್ಮಪ್ಪಂಗೆ ಮುಡ್ಪು ಹಣ ಕಟ್ಟಿಸುದು, ಹೊಸ್ತುಟದ ಕದಿರ್ ಕಟ್ಟುದು, ಅ ದಿನ ಕೊಲೆಗಳಿಗೆ ಇಸಿ ಪ್ರಾರ್ತನೆ ಮಾಡ್ತು, ಮೊದುವೆಗೆ ಮುಂದೆ ಗೂಡೆ/ಹೈದ ಸೋದರರ ಮಾತಾಡ್ಸಿಕೆ ಬಾಕಾಕನ ಗುರುಕಾರ್ನೂರ್ ಗೆ ಬಡ್ಸುದು, ಜಿಸುನ ಕಣಿ ಇಸುದು, ಹಿರಿಯ್ರ್ ಆರ್ಸಿೀವಾದ ತಕಂಯೊದು ಎಲ್ಲವೂ ಕನ್ನಿ ಕಂಬನ ಕೇಂದ್ರವಾಗಿಸಿಕಂಡ್ ಮಾಡುವೆ. ಎಲ್ಲ ಕ್ರಮನ ಕನ್ನಿಕಂಬದ ಎದ್ರೆ ಕೆಲ್ಬು ಕಡ ಜೊರಿ ನೆಲಲಿ ಕ್ರಮ ಮಾಡಿರೆ ಕೆಲವು ಕಡೆ ಒಲಿ ಮೊಂದ್ರಿ ಹಾಸಿ, ಮಣೆ ಇಸಿ ಕ್ರಿಯಾಚರಣೆ ಮಾಡುವೆ. ಕೆಲವು ಜಾಗಲಿ ಜೊಳ್ಗಿಗೆ ಎದ್ದ್ ಮನೆ ಹೆಂಗ್ಸ್ ಕನ್ನಿಕಂಬಕ್ಕೆ ದೀಪ ಇಸಿ ಅದೇ ದೀಪಂದ ಮಡ್ಲ್‌ಲಿ ಒಲೆಗೆ ಕಿಚ್ಚಿ ಮೊಡೂಕುಂತೇಳ್ವ ಕ್ರಮ ಕೂಡ ಉಟ್ಟು. ಇನ್ನ್ ಕೆಲವು ಮನೆಗಳಲ್ಲಿ ಹಿಂಜೊತ್ ಗೆ ದೀಪ ಇಸುವ ಕ್ರಮ ಕೂಡ ಉಟ್ಟು(ಕೇರಳಲಿ ಈ ಕ್ರಮ ಹೆಚ್ಚಿನ ಮನೆಗಳಲ್ಲಿ ಕಂಡದೆ). ಮನೆ ಹೆಳ್ಮಕ್ಕಳೆ ದೀಪ ಇಸೋಕುಸ್ತ ವಾಡಿಕೆನೂ ಉಟ್ಟೊ. ಒಟ್ಟಾರೆ ಜೀವನಾವರ್ತನ ಮತ್ತೆ ವಾರ್ಷಿಕಾವರ್ತನದ ಹಲವ್ ಕ್ರಮಗ ಕನ್ನಿಕಂಬದ ಹಕ್ಕಲೆನೆ ನಡೆತಿದ್ದದೆ.

ಹಟ್ಟಿಲಿ ಕರು ಹಾಕಿರೆ ಒಂದಷ್ಟ್ ದಿನ ರಾತ್ರೆಗೆ ಮನೆಯೊಳ್ಗೆ ಕನ್ನಿ ಕಂಬಕ್ಕೆ ಕಟ್ಟುವೆ. ಇದ್ ಅಡ್ಗೆ ಕೋಣೇಲಿ ಇರ್ವ ಕರ್ ಬೆಚ್ಚ ಇದ್ದದೆ ಸಣ್ಣ ಕರ್ ಗೆ ಹಟ್ಟಿಲಿ ಒಳ್ದ ದನಂಗ ಮೆಟ್ಟುದು ಹಾಯೋದು ತಪ್ಪಿದೆ, ಹುಲಿ ಹೊರ್ದ್ರ್ ಕೂಡ ತಪ್ಪಿದೆ ಅಂತ ಜನಪದರ ನಂಬಿಕೆನೂ ಆಗಿರ್ದ್ರ್, ಒಟ್ಟಿಗೆ ದನ/ಕರು ಪವಿತ್ರಂತೇಳುವ ನೆಲೆಯು ಆಗಿರ್ದ್ರ್. ಕರು ಕಟ್ಟುದುಕೆ ಸಮರ್ತನೆಯಾಗಿ ಅರೆಬಾಸೆ ಗೌಡರ್ ಗಂಗಾತೀರಂದ ದಕ್ಷಿಣಕ್ಕೆ ಬಂದೂ ಹಟ್ಟಿಕಾರಲಿ ಗೋವಳರದ್ದು ಒಂದು. ಗೋಪಾಲರೇ ಈ ಗೌಡರು ಆದರು ಅಂತೇಳಿ ಕೂಡ ತಿಳ್ದು ಬಂದದೆ.

ಬೆಳ್ತಂಗಡಿನ ಶ್ರೀ ಯದುಪತಿ ಗೌಡ್ರ ಲೆಕ್ಕಲಿ ಈ ಕಂಬ ಮನೆ ಒಕ್ಕಲ್‌ನ ಸಮಯ ಅಂದರೆ ಮೂರ್ತದ ಸಮಯಕ್ಕೆ ಹಾಕ್ತ ಕಂಬ ಹಂಗಾಗಿ ಇದ್ರ ಮೂರ್ತದ ಕಂಬಾಂತ ಕೂಡ ಕರ್ದ್ರವೆ. ಅಡ್ಗೆ ಕೋಣೆಲಿ ಮನೆ ಒಕ್ಕಲ್ ಆದ ನೆಂಪ್ಗೆ ಹಾಕುವೆ. ಅಡ್ಗೆ ಮನೆ ದೆವ್ವ ದೇವರ್‌ಗ ಇದ್ದವೆಂತ. ಇದ್ ಪಂಡ್‌ನ ಕಾಲಂದಲು ಇದ್ದ ನಂಬಿಕೆ. ಬೆಳ್ತಂಗಡಿ ಪ್ರದೇಸಲಿ ಬಟ್ರ್ ಗಳ ಮನೆಲಿ ದೇವರ ಕೋಣೆಲಿ ಸಾ ಕನ್ನಿಕಂಬ ಇದ್ದವೆ ಅಂತ ಅಬಿಪ್ರಾಯ ಪಟ್ಟವೆ. ಕುಂಞಟ್ಟಿಯ ಶಿವರಾಮ ಮಾಸ್ಟ್ರು ಇದ್ ಸಂಪತ್ತಿನ, ಸಮೃದ್ಧಿ ಗುರ್ತಿಸುವ ಪ್ರಕೃತಿ ಸಂಸ್ಕೃತಿಯ ಆಚರಣೆ ಅಂತ ಅನ್ಸವ ಹಂಚಿಕೊಂಡವೆ. ಹಿರಿಯರ ಆರಾಧನೆ ಗುರುಕಾರ್ನೆವರ ಆರಾಧನೆ ಆಗಿರ್ದ್ರ್. ಹಿರಿಯರ ನೆಂಪಿಸಿಕೆಂತ ಅವ್ ಇದರ ಒಂದ್ ಆರಾಧನೆ ಮಾಡಿರ್ವ. ಪುನರ್ಜನ್ಮದ ಕಲ್ಪನೆ ಇಲ್ಲದ ಗೌಡ್ರ್ ನಮ್ಮ

ಹಿರಿಯರ ನೆಂಪಿಸಿಕಂತ ಕೋಲೆಗೆ ಇಸುವ ಕ್ರಮ ಮಾಡ್ವೆ. ಅಷ್ಟೆ ನಮ್ಮ ಮುಂದಿನ, ಹಿಂದಿನ ಆಗು-ಹೋಗುಗಳ ಕಾರ್ಯಕ್ಕೆ ಕಾರಣಕರ್ತರ್ ಅಂತ ನಂಬಿರುದು. ಹಿಂಗೆ ಆಚರಣಾ ರೂಪಲಿ ಹಿರಿಯರ್ಗೆ ಕೊಡುವ ಮೊರ್ಯಾದಿಸ ಅದೆ.

ವಿಸೇಸ ದಿನ ಮತ್ತೆ ಸಮಯಲಿ ಇದಕ್ಕೆ ಹೆಚ್ಚಿನ ಮೊರ್ಯಾದಿ ಉಟ್ಟು. ಮನೆನ ಯಜಮಾನನಂಗೆ ಇದಕ್ಕೆ ಮೊದಲ ಅರೆಬಾಸೆನ ಸುರುನ ತಿಂಗ ಆದ ಪ್ರೊಗ್ಗು ತಿಂಗಲಿ ಬರ್ವ ಬಿಸುವಿನ ದಿನ ಮನೆಲಿ ಬೆಳ್ಳ್ ಎಲ್ಲ ನೆಟ್ಟಿಕಾಯಿ. ಹಣ್ಣ್‌ಗಳ ಸುತ್ತೆಯೊಟ್ಟಿಗೆ ಕೇಪ್ಲ ಹೂ. ಕಾಲ್ಬೀಪ. ಕನ್ನಡಿ ಇಸಿ ಬಿಸು ಕಣಿ ಇಸುದು. ಹಿರಿಯರ ಆಸಿರ್ವಾದ ತಕಂಬೊದು. ಹೊಸ್ತುನ ದಿನ ಕದಿರ್ ತೆನೆನ ಸುರೂಗೆ ಇದಕ್ಕೆ ಕಟ್ಟುದು. ಇದ್ ಅಷ್ಟ ಕೋಣೆಂದನೆ ನಮ್ಮ ಆಹಾರ ಮತ್ತು ಸಂಸ್ಕೃತಿ ಹುಟ್ಟಿರುದು ಅಂತ ಆಗಿರುದೊ ಏನೋ?..

ತುಳುನಾಡ್‌ನ ಮೂಲ/ತಳ ಜನಾಂಗದ ಜನ್ರಲಿ ಮೊದ್ವೆನ ಮೊದಲ್ ಹೈದ ಅಥವಾ ಗೂಡೆ ಕನ್ನಿಕಂಬನ ನೆಟ್ಟ್ ಉಳ್ಳಾಲ್ತಿ ಗುರುನ ಆರಾಧನೆ ಮಾಡ್ವೆ. ಇದರ Edgar Thurston Milk Post (ಹಾಲು ಕಂಬ) ಅಂತ ಕರ್ದದೆ. ಇಜ್ಜಾಲ್‌ಲಿ ಹಾಕಿದ ಚಪ್ಪರನ ನೊಡುಲಿ ಕನ್ನಿಕಂಬ (ಮುಹೂರ್ತ ಕಂಬ) ಅಂತೇಳಿ ಒಂದೆರಡು ದಿನದ ಮಟ್ಟಿಗೆ ಹಾಕುವೆ. ಈ ಕಂಬನ ಮೊಡ್ಪೊಳ ಕೊಟ್ಟ ಮಡಿ ಬಟ್ಟೆಲಿ ಸುತ್ತಿ ಸಿಂಗಾರ ಮಾಡ್ವೆ. ಕಂಬದ ಕೊಡಿಗೆ ಹಾಲೆ(Alstonia Scholaris) ಮರದ ಗೆಲ್ಲ್ ಕಟ್ವೆ. ಈ ಹಾಲೆ ಮರ ಕೂಡ ಹಾಲ್ ಬರ್ವ ಮರ ಆಗಿರ್ದು ವಿಸೇಸ. ಮರದ ಹಕ್ಕಲೆ ಪಾಳೆ ಶಾಸ್ತ್ರಂತೇಳಿ ಊರ್ನ ಗುರ್ಕಾರ ಕ್ರಮ ಮಾಡ್ವೆ. ಮೊದ್ವೆ ಆಕಿರ್ವ ಹೈದ/ಗೂಡೆ ಎಣ್ಣೆ ಅರಸಿನ ಆಗಿ ಮೀದ್ ಬಂದ್ ಮಡಿಬಟ್ಟೆ ಉಟ್ಟ್ ಕನ್ನಿಕಂಬದ ಎದ್‌ರ್ ನಿಲ್ಲೊಕು. ಕನ್ನಿಕಂಬೊದ ಎದ್‌ರ್ ಸ್ವಸ್ತಿಕ. ಕಲಸ-ಕನ್ನಡಿ. ದೀಪ. ವೀಳ್ಯ. ಗುರು-ಕಾಣಿಕೆ ಎಲ್ಲ ಇಸಿ ಮುತ್ತೈದೆರ್ ಕನ್ನಿಕಂಬಕೆ ಆರತಿ ಮಾಡ್ವೆ. ಗುರ್ಕಾರ್(ಯಜಮಾನ) ಕೈಮುಗ್ಗ್ ನೂಲ್‌ಲಿ ಪೋಣಿಸಿದ ಕರಿಮಣಿನ ಕನ್ನಿಕಂಬಕ್ಕೆ ಕಟ್ಟಿ ಮತ್ತೊಂದು ಕರಿಮಣಿನ ಹೈದ ಅತವಾ ಗುಡೆನ ಕುತ್ತಿಗೆಗೆ ಕಟ್ವೆ. ಮಾರ್ನೆ ದಿನ ದಿಬ್ಬಣ ಬಂದ ಹೈದ/ಗೂಡೆ ಅವರ ಅಪ್ಪ-ಅವ್ವನ ಕನ್ನಿಕಂಬಕ್ಕೆ ಮೂರ್ ಸುತ್ತ್ ಬರ್ಸಿ ಅಡ್ಡ ಬೀಳ್ಸಿ ಕನ್ನಿಕಂಬದ ಎದ್‌ರೆ ಧಾರೆ ಎರ್ದ್ ಬುಟ್ಟವೆ. ಹೆಚ್ಚಾಗಿ ಮೊದ್ವೆ ಗೂಡೆನ ಕಡೆಲಿ ಇದ್ದದೆ. ಆಗ ಹೈದನ ದುನೆವ್ ಗೂಡೆನ ಮನೆಗೆ ಹೋಗಿ ಅಲ್ಲಿ ದೇಸೆ ಮಾಡಿ ಕಡೆಗೆ ಹಿಂದೇನ ದಿನ ಮೊದುಮಂಜಗೆ ಕಟ್ಟಿದ ಕರಿಮಣಿನ ಜಾಳೆ ಮರಕ್ಕೆ ಕಟ್ಟಬಂದವೆ. ಕಡೆಗೆ ಅಂದ್ನ ದಿನನೆ ಕನ್ನಿಕಂಬನ ತೆಗ್ದವೆ.

ಅರೆಬಾಸೆ ಪ್ರದೇಸ ಗೌಡರ ಮನೆಲಿ ಅಲ್ಲಲ್ಲಿ ಮಟಗ ಇರುದು ಕೆಲವೊಂದು ಕಡೆ ಚಂದನದ ಬೊಂಬೆಗ, ಲೋಹದ ಮೂರ್ತಿಗ ಕಂಡದೆ. ಅದಕ್ಕೆ ಕ್ರಮ ಮಾಡಿಕೆ/ ಪೂಜೆ ಮಾಡಿಕೆ ಜೋಗಿ ಜನಾಂಗದವ್ರು ಪ್ರತಿ ತಿಂಗ ಬಂದವೆ. ಇದು ನಾತ ಪಂತದ ಗುರ್ತು ಆಗಿರುದೊ ಕಂಡದೆ ಅದ್ಕೆ ಹೆಚ್ಚೆ ಬಲಿ ಕೊಡುವಂಗೆ ಈ ಪ್ರದೇಸಲಿ ಇರುವ ಸ್ಥಳದ ಹೆಸ್ರುಗ ದಾಸ್ತಮೂಲೆ, ದಾಸರಕೋಡಿ, ಸಿದ್ಧಮೂಲೆ, ಸಿದ್ಧಕಟ್ಟೆ ಹಂಗೆನೆ ಬೆಳ್ತಂಗಡಿ ಮತ್ತು ಸುಳ್ಯದ ತುಳು ಮತ್ತು ಅರೆಬಾಸೆ ಮಾತಾಡ್ವ ಪ್ರದೇಸಲಿ ಆರಾಧನಾ ಮಟ್ಟಿಲಿ

ನಡೆವ ಪುರ್ಸೆರೆ ನಲಿಕೆ/ ಸಿದ್ದವೇಸ. ಅದ್ರಲಿ ಬರ್ವ ಲಕಡಿ ಪೂಜೆ, ವೆಂಕಟರಮಣ ದೇವರಿಗೆ ಕಟ್ವ ಮುಡಿಪು ಹರ್ಸಯ ಕ್ರಮಗ ಎಲ್ಲ ಗೌಡರ್/ಅರೆಬಾಸೆ ಪ್ರವೇಸ ತಾಂತ್ರಿಕ ಪಂತದ ನೇರ ಅನುಯಾಯಿಗಾಗಿದ್ದನೋ ಏನೂ? ಅಂತ ಕಂಡದೆ. ಆಹಾರಲಿಯೆ ದೆವ್ವ ದೇವರ ನೋಡುವ ಜನಂಗ ಅಡ್ಗೆ ಮನೆಯ ಪವಿತ್ರಂತೇಳಿ ಒಂದು ಪುಡೆಂದ ನೋಡ್ರೆ ಕನ್ನಿಕಂಬ ನಾಮದಂಗೆ ಇರುವ ಹಂಗೆನೆ ಲಿಂಗ ರೂಪಿ ಅಗಿರ್ವ ಕನ್ನಿ ಕಂಬ, ಸೈವ ಮೂಲದ ಕಾಪಾಲಿಕ, ಲಕುಲೀಸ, ಸಾಕ್ತ, ಪಾಸುಪತ ಪಂತಗಳ ಆಚರಣೆಯ ಪಳೆಯುಳಿಕೆ ಕೂಡ ಆಗಿರ್ದು.!

ಇಲ್ಲಿ ಬಳ್ಸುವ ಹಾಲು ಬರ್ವ ಮರ, ಹಾಲು ಕಂಬ ಇದ್ ಮೊಸ್ಸನ ಆಚರ್ಣೆ ಮತ್ತೆ ಆರಾದನೆ ನೆಲೆಲಿ ಅಲ್ಲಲ್ಲಿ ಜೀವನದ ಬಾಗ ಅಗಿದ್ದದೆ. ಸಾಂಸ್ಕೃತಿಕ ಕಾರಣಂದ ಬಹುರೂಪದ ಉಪಯೋಗ ಅಗಿದ್ದು ನೆಟ್ಟ್ ಬೆಳ್ಸುವ ಕ್ರಮ ಕೂಡ ಬಂದಿದ್ದದೆ. ಕನ್ನಿ ಕಂಬೊಕ್ಕೆ ಹೆಚ್ಚಾಗಿ ಹಲ್ಸ್ನ ಮರದ ತಿರ್ಳ್‌ನ ಬಳ್ಸುದು ವಾಡಿಕೆ, ತುಂಬಾ ದಿನ ಬಾಳಿಕೆ ಬರೋಕು ಅಂತ ತಿರ್ಳ್ನ ಉಪಯೋಗ ಮಾಡ್ವೆ. ಹಲ್ಸಿನ ಮೊರ ಮನೆನ ಕುರ್ಸು, ಬಾಗಿಲ್, ಕೆತ್ತನೆಗೆ, ದೆವ್ವಸ್ತಾನಕ್ಕೆ, ಪೂಜೆಗೆ, ಕಾಷ್ಟಸಿಲ್ಪಕ್ಕೆ, ದೇವಸ್ತಾನದ ರತಕ್ಕೆ ಹಿಂಗೆ ಸಾಂಸ್ಕೃತಿಕ ಪಾವಿತ್ರತೆಯೊಂದಿಗೆ ಎಲ್ಲ ಕಡೆ ಪ್ರಾದಾನ್ಯತೆ ಉಟ್ಟು. ಇದ್ ಆಚಾರಿಗೆ ಕೆತ್ತಿಕೆ ಸುಲಭ ಅಗಿರ್ವ ಮೆತ್ತನೆ ಮರ ಅಗಿದ್ದದೆ. ಹಾಲು ಬರ್ವ ಮರ ಜನಪದರ ಮಾತಿನ ಪಲವಂತಿಕೆನ ಅಡ್‌ಂಗಿದ ರೂಪ ಅಗಿರುದು.

ಕನ್ನಿ ಕಂಬ ಇರ್ವ ಮನೆಲಿ ಒಂದಷ್ಟು ನಿಷೇದಗ, ಕಟ್ಟಲೆಗ ಇದ್ದದೆ. ಕನ್ನಿ ಕಂಬೊದ ಮೇಲೆ ಕುದ್ರಿಕೆ ಬೊತ್ತು, ಕಾಲಿಂದ ಮೆಟ್ಟಿಕೆ ಬೊತ್ತು, ಋತುಮತಿಯಾದವೂ ಬಾಕೆ ಅಗದ್, ಸೂತಕದವೂ ಹೋಕೆ ಅಗದ್, ಟೋಪಿ ಇಸಿಕಂಡ್ ಹೋಕೆ ಅಗದ್ ಅಂತ ಉಟ್ಟು. ಕೊತ್ತಿಗೆ ಇಸ್ವ ಗೆಂಜಿನ ಪಾತ್ರೆಗ ಕನ್ನೆಕಂಬದ ಒಸಿ ದೂರಲಿ ಇಸೊಕು ಇಲ್ಲರೆ ಮಡೆ ಅಗಿ ಅಸುದ್ದ ಅದೆ, ಸಣ್ಣ ಕೂಸುಗಸಾ ಮುಟ್ಟಿಕೆ ಬೊತ್ತು ಇದ್ ಸುದ್ದಾಚರಣೆ ಮತ್ತೆ ಪವಿತ್ರತೆ ನೆಲೆಲಿ ಇರುದು.

ಸ್ತಿತಿಯಂತರದ ನೆಲೆಲಿ ಅರೆಬಾಸೆ ಗೌಡ್ರ ಮನೆಲಿ ದೇವರ ಪ್ರತಿಸ್ಟಾಪನೆಯಾಗಲಿ, ದೇವರ ಕೋಣೆಯಾಗಲಿ ಇತ್ಲೆ. ದೈವದ ಭಂಡಾರದ ಕೋಣೆ ಮತ್ತೆ ಅಡ್ಗೆ ಕೋಣೆಗ ಮಾತ್ರ ಇತ್. ಆದರೆ ಈಗನ ಕಾಲಲಿ ಅಡ್ಗೆ ಮನೆಲಿ ಸೌದೆ ಒಲೆ ಮಾಯ ಆಗಿ, ಗ್ಯಾಸ್ ಸ್ಟವ್ ಇರ್‌ವ ಕಾರಣಕ್ಕೆ ಕನ್ನಿಕಂಬ ಅಡ್ಗೆ ಮನೆ ಬುಟ್ ದೇವರ ಕೋಣೆ ಸೇರಿಟ್ಟು. ಹಲವ್ ಮನೆಲಿ ಇದರ ಮಹತ್ವನ ಕೂಡ ಮರ್ತ್ ಬುಟ್ಟೊಳ.

ಹಿಂಗೆಲ್ಲ ಒಂದ್ ನೆಲೆನ ಪವಿತ್ರ ಮತ್ತೊಂದ್ ಸೃಷ್ಟಿಯ ಬಹುರೂಪದ ರೂಪಲಿ ಸಹಾಯವಾಗ್ವಂಗ ಈ ಕನ್ನಿಕಂಬ ವೈಸಿಸ್ಟ್ಯವಾಗಿ ಅರೆಬಾಸೆ ಪರಿಸರದ ಮನೆ-ಮನಗಳಲ್ಲಿ ಅರಾದನೆನ ಮೂಲ ಮತ್ತು ಕೇಂದ್ರವಾಗಿ ಉಟ್ಟು.

**ಓದಿದ ಪುಸ್ತಕಗ**

1. Edgar Thurston, 1909, Castes and Tribes of Southern India.
2. ಪಿ. ರಾಮಕೃಷ್ಣ ಆಚಾರ್, ನಲಿಕೆ ಜನಾಂಗದ ಕುಣಿತಗಳು – ಒಂದು ಅಧ್ಯಯನ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ.

3. ಬಿ. ಶಿವರಾಮ ಶೆಟ್ಟಿ. 1992. ತುಳುನಾಡಿನ ಸಸ್ಯ ಜಾನಪದ. ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ
4. ಪುರುಷೋತ್ತಮ ಬಿಳಿಮಲೆ. 1985. ಸುಳ್ಯ ಪರಿಸರದ ಗೌಡ ಜನಾಂಗ-ಒಂದು ಸಾಂಸ್ಕೃತಿಕ ಅಧ್ಯಯನ. ಮಂಗಳೂರು ವಿಶ್ವವಿದ್ಯಾನಿಲಯ. ಮಂಗಳಗಂಗೋತ್ರಿ.
5. ತುಳುನಾಡಿನ ಜನಪದ ವಾಸ್ತುಶಿಲ್ಪ, 2008. ಬಿ ಪ್ರಕಾಶ್ಚಂದ್ರ ಶಿಶಿಲ. ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ
6. ಕೆ ಚಿನ್ನಪ್ಪ ಗೌಡ.2003. ಗೌಡ ಜನಾಂಗ. ಇತಿಹಾಸ ಮತ್ತು ಸಂಸ್ಕೃತಿ. ಬೆಳ್ಳಿಹಬ್ಬ ಆಚರಣಾ ಸಮಿತಿ. ಒಕ್ಕಲಿಗರ ಯಾನೆ ಗೌಡರ ಸೇವಾ ಸಂಘ. ಮಂಗಳೂರು.
7. ಕೊಡಗು ಮತ್ತು ಕೊಡವರು. 1962. ಶ್ರೀ ಜಿ. ಡಿ. ಗಣಪತಿ – 1962
8. ಪೂವಪ್ಪ ಕಣಿಯೂರು 2009. ಮೌಖಿಕ ಸಂಕಥನ. ತರಂಗಿಣಿ ಪ್ರಕಾಶನ. ಸುಳ್ಯ
9. ಪುತ್ತೂರು ಅನಂತರಾಜ ಗೌಡ. 2018. ರಾಜಪರಂಪರೆಯ ಕೊಡಗು ಮತ್ತು ದ.ಕ ಗೌಡರು.
10. ಡಾ. ಕೂಯಿರಾ ಎಸ್. ಬಾಳೆಪುಣಿ. 2010. ಮುಗೇರರ ದುಡಿ ಕುಣಿತಗಳು. ಸ್ವರೂಪ ಮತ್ತು ಸಂಸ್ಕೃತಿ.
11. ಎಂ ಜಿ ಕಾವೇರಮ್ಮ. ಕನ್ನಿಕಂಬ. ಬಿಡಿಲೇಖನ.

<u>ವಕ್ತೃ ಮಾಹಿತಿ</u>

12. ಕುಶಾಲಪ್ಪ ಗೌಡ. 68ವರ್ಷ. ಕಳುವಾಜೆ ಮನೆ. ಕಾಣಿಯೂರು. ಪುತ್ತೂರು ತಾಲೂಕು.
13. ಕೇಶವ ಆಚಾರಿ. 60 ವರ್ಷ. ಪುಂಡಿಗದ್ದೆ ಏನೆಕಲ್. ಕಡಬ ತಾಲೂಕು.
14. ದಯಾನಂದ ಗೌಡ. ಹೊಸಂಗಡಿ ಮನೆ. ಏನೆಕಲ್. ಕಡಬ ತಾಲೂಕು.

✍ **ಭರತೇಶ, ಅಲಸಂಡೆಮಜಲು**
ಕೊಲ್ತಿಗೆ ಗ್ರಾಮ, ಪುತ್ತೂರು ತಾಲೂಕು,
ದ.ಕ., ಮೊ. : 9008027271

## ಹೊಸ ಸದಸ್ಯರ ಪರಿಚಯಗ



# ಡಾ.ದಯಾನಂದ.ಕೆ.ಸಿ ಕೂಡಕಂಡಿ

ಮಡಿಕೇರಿ ತಾಲ್ಲೂಕ್‌ನ ಭಾಗಮಂಡಲ ನಾಡ್, ತಾವೂರು ಗ್ರಾಮದ ಕೂಡಕಂಡಿ ಚಂದ್ರಹಾಸ ಮತ್ತೆ ಹರಿಣಾಕ್ಷಿಯವ್ರ ಮಂಙ. ಇವ್ರ ಅರ್ಥಶಾಸ್ತ್ರ ವಿಷಯಲಿ ಸ್ನಾತಕೋತ್ತರ ಪದವಿನ ಚಿನ್ನದ ಪದಕ ಮತ್ತೆ ರ್‍ಯಾಂಕ್‌ನೊಂದಿಗೆ ಮೈಸೂರು ವಿಶ್ವವಿದ್ಯಾಲಯ ದಿಂದ ಪಡ್ಡೊ. ಸ್ನಾತಕೋತ್ತರ ಪದವಿಲಿ ಇರ್ಕನ ಯು.ಜಿ.ಸಿ–ಎನ್.ಇ.ಟಿ. ಪರೀಕ್ಷೆಲಿ ಉತ್ತೀರ್ಣರಾದೊ. ತಮಿಳ್‌ನಾಡ್‌ನ ಪೆರಿಯರ್ ವಿಶ್ವವಿದ್ಯಾನಿಲಯಂದ ಎಂ.ಫಿಲ್. ಪದವಿನ ಮತ್ತೆ ಮೈಸೂರು ವಿಶ್ವವಿದ್ಯಾನಿಲಯಂದ ಪಿ.ಹೆಚ್.ಡಿ. ಪದವಿನ ಪಡ್ಕೊಂಡೊ. ಮಂಗಳೂರು ವಿಶ್ವವಿದ್ಯಾ ಲಯದ ಬಿ.ಕಾಂ ಪದವಿ ತರಗತಿಗೆ MONEYAND PUBLIC FINANCE ಎಂಬ ಪುಸ್ತಕನ ಪ್ರಕಟಿಸಿಯ್ಯೊಳೊ. 2007ರಲ್ಲಿ ಕೆ.ಪಿ.ಎಸ್.ಸಿ. ಮೂಲಕ ಸರ್ಕಾರಿ ಪ್ರಥಮ ದರ್ಜೆ ಕಾಲೇಜ್‌ನ ಅರ್ಥಶಾಸ್ತ್ರ ಸಹಾಯಕ ಪ್ರಾಧ್ಯಾಪಕರಾಗಿ ನೇಮಕಾತಿ ಆಗಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜ್, ಮಡಿಕೇರಿಲಿ ಕೆಲಸ ಮಾಡ್ತೊಳೊ. 2013 ರಿಂದ 2017ರ ವರೆಗೆ ಸರಕಾರಿ ಪ್ರಥಮ ದರ್ಜೆ ಮಹಿಳಾ ಕಾಲೇಜ್ ಮಡಿಕೇರಿನ ನೋಡಲ್ ಅಧಿಕಾರಿಯಾಗಿ ಕೆಲ್ಸ ಮಾಡ್ಯೊಳೊ. ಇವ್ರ ಅಂತರಾಷ್ಟ್ರೀಯ, ರಾಷ್ಟ್ರೀಯ, ರಾಜ್ಯ ಮತ್ತೆ ಜಿಲ್ಲಾ ಮಟ್ಟದ ಸಮ್ಮೇಳನಲ್ಲಿ, ವಿಚಾರ ಸಂಕಿರಣಲ್ಲಿ, ಸಮಾವೇಶಲ್ಲಿ ಭಾಗವಹಿಸಿ ಸಂಶೋಧನಾತ್ಮಕ ಪ್ರಬಂಧಗಳನ್ನ ಮಂಡಿಸಿ ಪ್ರಕಟಿಸಿಯ್ಯೊಳೊ. ಪ್ರಚಲಿತ ವಿದ್ಯಮಾನಕ್ಕೆ ಸಂಬಂಧಿಸಿದ ಹಲವಾರು ಲೇಖನಗಳನ್ನು ಪತ್ರಿಕೆಗಳಲ್ಲಿ, ನಿಯತಕಾಲಿಕೆ ಗಳಲ್ಲಿ ಪ್ರಕಟಿಸಿಯ್ಯೊಳೊ.

---



# ಕುಸುಮಾಧರ ಎ.ಟಿ

ದಕ್ಷಿಣ ಕನ್ನಡ ಜಿಲ್ಲೆನ ಸುಳ್ಯ ಕಸಬಾ ಗ್ರಾಮದ ಅಲಿಕೆ ಮಜಲು ಎಂಬಲ್ಲಿ 1971 ಜನವರಿ ತಿಂಗಳ 10ನೇ ತಾರೀಖಿಗೆ ಹುಟ್ಟಿದ್. 10ನೇ ಕ್ಲಾಸ್‌ವರೆಗೆ ಸುಳ್ಯದ ಗಾಂಧಿನಗರಲಿ ವಿದ್ಯಾಭ್ಯಾಸ. ಪದವಿವರೆಗೆ ಸುಳ್ಯದ ಎನ್.ಎಂ.ಸಿ.ಲಿ ಓದಿದ್ ಎಂ.ಎ. ಸ್ನಾತಕೋತ್ತರ ಪದವಿನ ಹಾಸನದ ಹೇಮ ಗಂಗೋತ್ರಿಲಿ ಪಡೆದದ್ದ್.

ಕೋಲಾಟ, ವೀರಗಾಸೆ, ಡೊಳ್ಳುಕುಣಿತ, ನಾಟಕ, ಯಕ್ಷಗಾನಲಿ ವಿಶೇಷ ತರಬೇತಿ ಪಡ್‌ದ್ ರಾಜ್ಯಮಟ್ಟದ ಯುವಜನ ಮೇಳಲಿ ಪ್ರಥಮ ಸ್ಥಾನ ಪಡ್‌ಕೊಂಡಿದ್ದೊ. ವಿವೇಕಾನಂದ ಹಿರಿಯ ಪ್ರಾಥಮಿಕ ಶಾಲೆ ವಿನೋಬಾ ನಗರ ಇಲ್ಲಿ 10 ವರ್ಷ ಮುಖ್ಯ ಗುರುಗಳಾಗಿ, ಪಂಚಲಿಂಗೇಶ್ವರ ಪದವಿ ಪೂರ್ವ ಕಾಲೇಜು ಈಶ್ವರ ಮಂಗಲ ಇಲ್ಲಿ 5 ವರ್ಷ ಪ್ರಾಚಾರ್ಯರಾಗಿ, ಸರಕಾರಿ ಪದವಿ ಕಾಲೇಜು ಸುಳ್ಯ ಇಲ್ಲಿ 2 ವರ್ಷ ಅತಿಥಿ ಉಪನ್ಯಾಸಕರಾಗಿ ಸೇವೆ ಸಲ್ಲಿಸಿ ಅನುಭವ ಉಟ್ಟು. ಕಾಯರ್‌ತೋಡಿ ಶ್ರೀ ಮಹಾವಿಷ್ಣು ದೇವಸ್ಥಾನದ ಜೀರ್ಣೋದ್ಧಾರ ಸಮಿತಿ ಪ್ರಧಾನ ಕಾರ್ಯದರ್ಶಿಯಾಗಿ, ಸುಳ್ಯದ ಸಿ.ಎ. ಬ್ಯಾಂಕಿನ ಉಪಾಧ್ಯಕ್ಷರಾಗಿ ಕೆಲಸ ಮಾಡಿದ ಅನುಭವ ಉಟ್ಟು. ತಾಲೂಕ್‌ಲಿ 25 ಕ್ಕೂ ಹೆಚ್ಚು ತಂಡಗಳಿಗೆ ಜಾನಪದ ನೃತ್ಯ, ಕೋಲಾಟ, ಗೀಗೀ ಪದ ವೀರಗಾಸೆ ಹೇಳಿಕೊಟ್ಟೊಳೊ ಅಲ್ಲದೇ ನಾಟಕ ನಿರ್ದೇಶನ ಮಾಡಿದ ಅನುಭವ ಉಟ್ಟು.

## ಪುರುಷೋತ್ತಮ ಕಿರ್ಲಾಯ



ಸುಳ್ಯ ತಾಲೂಕು ಅರಂತೋಡು ಗ್ರಾಮದ ಕಿರ್ಲಾಯ ದೇವಣ್ಣ ಗೌಡ ಮತ್ತ್ ಅಕ್ಕಮ್ಮ ದಂಪತಿಗಳ ಮಂಙ. ಎಂ.ಎ. ಬಿ.ಇಡಿ. ಪದವಿ ಪಡ್ಂಡವು. ಮಡಿಕೇರಿ ತಾಲೂಕುನ ಪೆರಾಜೆ ಗ್ರಾಮಲಿರುವ ಜ್ಯೋತಿ ಪ್ರೌಢ ಶಾಲೆಲಿ ಅಧ್ಯಾಪಕರಾಗಿ ಉದ್ಯೋಗಕ್ಕೆ ಸೇರಿ, 1991ರ್‌ಂದ ಮುಖ್ಯೋಪಾಧ್ಯಾಯರಾಗಿ ಸೇವೆ ಸಲ್ಲಿಸಿ, 2019 ಮೇ ತಿಂಗಳ್ಲಿ ನಿವೃತ್ತಿಯಾದೊ. ಇವರ ಸೇವಾ ಅವಧಿಲಿ ಊರೊವರ ಮತ್ತ್ ಆಡಳಿತ ಮಂಡಳಿಯವರ ಸಹಕಾರಂದ ಜ್ಯೋತಿ ಪ್ರೌಢಶಾಲೆನ ಕೊಡಗು ಜಿಲ್ಲೆಲಿ ಒಂದ್ ಉತ್ತಮ ಸಂಸ್ಥೆಯಾಗಿ ರೂಪಿಸಿದ ಕೀರ್ತಿ ಇವ್ಕೆ ಸಲ್ಲಿದೆ. ಇವು ಕೊಡಗು ಜಿಲ್ಲಾಮಟ್ಟದ ಉತ್ತಮ ಶಿಕ್ಷಕ ಪ್ರಶಸ್ತಿಗೆ ಭಾಜನರಾದೊವು. ಹಲವು ಸಂಘ ಸಂಸ್ಥೆಲಿ ಸೇವೆ ಸಲ್ಲಿಸಿ ಅನುಭವ ಹೊಂದಿದೊವು. ಪ್ರಸ್ತುತಃ ಕಣ್ಣ ವೃಕ್ಷ ಸಂವರ್ಧನ ಚಾರಿಟೇಬಲ್ ಸಂಸ್ಥೆ ಸುಳ್ಯ ಇದರ ಅಧ್ಯಕ್ಷರಾಗಿ ಸೇವೆ ಸಲ್ಲಿಸ್ತಾ ಒಳೊ.

---

## ಡಾ. ವಿಶ್ವನಾಥ ಬದಿಕಾನ



ದಕ್ಷಿಣ ಕನ್ನಡ ಜಿಲ್ಲೆ ಸುಳ್ಯ ತಾಲೂಕು ಮಂಡೆಕೋಲು ಗ್ರಾಮದ ಬದಿಕಾನಲಿ ವಿಶ್ವನಾಥ ಬದಿಕಾನರ್ ಜನಿಸಿದೊ. ಗೌಡ ಕನ್ನಡದ ಜನಪದ ಕತೆಗಳು'ಗೆ ಎಂ.ಫಿಲ್. ಪದವಿ ಮತ್ತ್ 'ಕನ್ನಡ ಜಾನಪದ ಅಧ್ಯಯನದ ಮೊದಲ ಘಟ್ಟ' ಪಿ.ಎಚ್.ಡಿ. ಪದವಿನ ಪಡ್ಕೊಂಡೊಳೊ. 1996ರ್‌ಂದ ಮಂಗಳೂರ್‌ನ ಸ್ವಾಯತ್ತ ಸಂತ ಅಲೋಶಿಯಸ್ ಪದವಿ ಕಾಲೇಜ್‌ಲಿ ಕನ್ನಡ ಸಹಾಯಕ ಪ್ರಾಧ್ಯಾಪಕನಾಗಿ ಸೇವೆಲಿ ಒಳೊ. ಗೌಡ ಕನ್ನಡದ ಜನಪದ ಕತೆಗಳು–ವರ್ಗ ಮತ್ತು ಆಶಯಸೂಚಿ. ಗಾದೆಗಳು. ಎ.ಕೆ. ರಾಮಾನುಜನ್ ಬದುಕು ಬರಹಗಳು. ತುಳುತ ಕತಾ ಸಂಸ್ಕೃತಿ. ಅರೆಭಾಸೆನ ಅಜ್ಜಿ ಕತೆಗ– ಹಿಂಗೆ ಐದ್ ಪುಸ್ತಕ ಸಂಪಾದ್ಸಿ ಪ್ರಕಟಿಸಿಯೊಳೊ. ಮಂಗಳೂರು ವಿವಿ ಪ್ರಥಮ ಬಿ.ಎ. ಪಠ್ಯಪುಸ್ತಕಲಿ ಕನ್ನಡ ವಿಕಿಪೀಡಿಯ–ಕಲಿಕೆ ಬಳಕೆ ಮತ್ತ್ ತುಳು ವಿಕಿಪೀಡಿಯ–ಕಲಿಕೆ ಬಳಕೆ ಲೇಖನ ಬರ್ದೊಳೊ. ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿಗೆ ಗೌಡರೆ ಆಚರಣೆದ್ ತುಳು ಸಂಸ್ಕೃತಿದ ಪ್ರಾಧಾನ್ಯೊ ಮತ್ತ್ ಅರೆಭಾಸೆ ಅಜ್ಜಿಕತೆಗಳ ಪಟ್ಟಿ ಮತ್ತ್ ಪದಕೋಶ ಎಂಬ ಯುಜಿಸಿ ಮೈನರ್ ರಿಸರ್ಚ್ ಪ್ರಾಜೆಕ್ಟ್ ಯೋಜನೆ ತಯಾರ್ಸಿಯೊಳೊ. ಕನ್ನಡ ಮತ್ತ್ ತುಳು ವಿಕಿಪೀಡಿಯ ಸಂಪಾದಕರಾಗಿ ಒಳೊ.

## ಎಂ.ಎಸ್. ಜಯಪ್ರಕಾಶ ಗೌಡ ಮೋಂಟಡ್ಕ, ಬಿಳಿನೆಲೆ



ಸುಳ್ಯದ ದಿ॥ ಮೋಂಟಡ್ಕ ಶೇಷಪ್ಪ ಗೌಡ ಮತ್ತು ದಿ॥ ವೆಂಕಮ್ಮ ದಂಪತಿಗಳ ಪುತ್ರ. ಇವು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮಲಿ 35 ವರ್ಷ ವಿದ್ಯುತ್ ಮೇಲ್ವಿಚಾರಕನಾಗಿ ಕೆಲ್ಸ ಮಾಡಿ 2019 ನೇ ಇಸವಿಲಿ ನಿವೃತ್ತಿ ಆಗೊಳೆ. 1984ರ್‌ಂದ ಸುಳ್ಯಲಿ 8 ವರ್ಷ, 1992ರ್‌ಂದ 2019 ನೇ ಇಸ್ವಿ ಜನವರಿ ವರೇಗೆ ಬಿಳಿನೆಲೆಲಿ ಸೇವೆ ಸಲ್ಲಿಸ್ಯೊಳೆ. ಇವು 1972ರ್ಲಿ ನಾಟಕ ರಂಗಭೂಮಿಗೆ ಪ್ರವೇಶ ಮಾಡ್ಯೊಳೊ. ಸುಮಾರ್ 45 ವರ್ಷ ನಾಟಕ ರಂಗಭೂಮಿಲಿ ತೊಡಗಿಸಿಕೊಂಡೊಳೊ. ಈ ಅವಧಿಲಿ 150 ಕ್ಕೂ ಹೆಚ್ಚ್ ಕನ್ನಡ, ತುಳು, ಐತಿಹಾಸಿಕ, ಸಾಮಾಜಿಕ, ಪೌರಾಣಿಕ, ನಾಟಕಗಳಲ್ಲಿ ಅಭಿನಯಿಸುದರ ಒಟ್ಟಿಗೆ ನಿರ್ದೇಶನ ಮಾಡ್ಯೊಳೊ. ಮಕ್ಕಳ ರಂಗಭೂಮಿಗೆ ಹೆಚ್ಚ್ ಒತ್ತು ಕೊಟ್ಟು ಸುಮಾರ್ 50ಕ್ಕಿಂತಲೂ ಹೆಚ್ಚ್ ಮಕ್ಕಳ ನಾಟಕನ ನಿರ್ದೇಶನ ಮಾಡ್ಯೊಳೊ. ಇವು ರಾಷ್ಟ್ರಮಟ್ಟದ ಯುವಜನೋತ್ಸವಲಿ ಕೊಲ್ಕತ್ತಾ, ಡಾರ್ಜಿಲಿಂಗ್, ದೆಹಲಿ ಇಲ್ಲಿ 3 ಬಾರಿ ಸುಳ್ಯ ಯುವಕ ಮಂಡಲದ ಸದಸ್ಯರೊಂದಿಗೆ ಭಾಗವಹಿಸ್ಯೊಳೊ. ಅಲ್ಲದೆ ಭರತನಾಟ್ಯ ಜೂನಿಯರ್ ಪರೀಕ್ಷೆ ಪಾಸ್ ಆಗೊಳೊ.

ಇವು ಯುವಜನ ಮೇಳಲಿ ಕೋಲಾಟ, ಜಾನಪದ ನೃತ್ಯ, ಹಂಗೆ ಬೇರೆ ಬೇರೆ ವಿಷಯಲಿ ರಾಜ್ಯ ಮಟ್ಟದ ಪ್ರಶಸ್ತಿ ಪಡೊಳೊ. ಕೋಲಾಟದ ತರಬೇತುಗಾರನಾಗಿ ಒಳೊ. ಮಿಮಿಕ್ರಿಗಾರನಾಗಿ ಬೇರೆ ಬೇರೆ ಕಡೆ ಕಾರ್ಯಕ್ರಮ ಕೊಟ್ಟೊಳೊ.

---

## ಡಾ. ಪುರುಷೋತ್ತಮ ಕೆ.ವಿ. ಕರಂಗಲ್ಲು



ಡಾ. ಪುರುಷೋತ್ತಮ ಕೆ.ವಿ. ಇವು ದಕ್ಷಿಣ ಕನ್ನಡ ಜಿಲ್ಲೆನ ಸುಳ್ಯ ತಾಲೂಕ್‌ಲಿರುವ ದೇವಚಳ್ಳ ಗ್ರಾಮದ ಕರಂಗಲ್ ದಿವಂಗತ ವೆಂಕಪ್ಪಗೌಡ ಮತ್ತು ದಿವಂಗತ ದುಗ್ಗಮ್ಮ ಇವರ ಎರಡ್ನೆ ಮಂಙ.

1995ರಲ್ಲಿ ರಾಷ್ಟ್ರೀಯ ಅರ್ಹತಾ ಪರೀಕ್ಷೆ (ಎನ್ ಇಟಿ)ನ ಸುರೂನ ಪ್ರಯತ್ನಲೇ ಪಾಸು ಮಾಡಿರುವ ಇವು ಮಂಗಳೂರು ಸೇಕ್ರೆಡ್ ಹಾರ್ಟ್ ಕಾಲೇಜು, ಮಡಂತ್ಯಾರು ಮತ್ತು ಸಂತಫಿಲೋಮಿನಾ ಕಾಲೇಜು ಪುತ್ತೂರುಗಳಲ್ಲಿಯೂ ಅರ್ಥಶಾಸ್ತ್ರ ಉಪನ್ಯಾಸಕರಾಗಿ ಸೇವೆ ಮಾಡ್ಯೊಳೊ. ಆ ಮೇಲೆ ವರ್ಗಾವಣೆ ಆಗಿ 2004ರಿಂದ ಪೊಂಪೈ ಕಾಲೇಜು, ಐಕಳ ಇಲ್ಲಿ ಅರ್ಥಶಾಸ್ತ್ರ ಪ್ರಾಧ್ಯಾಪಕರಾಗಿ, ವಿಭಾಗ ಮುಖ್ಯಸ್ಥರಾಗಿ, ಕಾಲೇಜಿನ ಎನ್.ಸಿ.ಸಿ. ನೌಕಾದಳದ ಅಧಿಕಾರಿಯಾಗಿ 15 ವರ್ಷಗಳ್‌ಂದ ಸೇವೆ ಸಲ್ಲಿಸಿರುವ ಇವು ಪ್ರಸ್ತುತ ಅದೇ ಕಾಲೇಜ್‌ಲಿ ಪ್ರಿನ್ಸಿಪಾಲರಾಗಿ ನೇಮಕ ಆಗೊಳೊ. 2010ರಲ್ಲಿ ಇಂದಿರಾಗಾಂಧಿ ನ್ಯಾಷನಲ್ ಓಪನ್ ಯೂನಿವರ್ಸಿಟಿಂದ 'ಪೋಸ್ಟ್ ಗ್ರಾಜುವೇಟ್ ಡಿಪ್ಲೋಮ ಇನ್ ಹೈಯರ್ ಎಜುಕೇಶನ್' ಮಾಡಿರುವ ಇವು 2012ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾನಿಲಯಂದ ಎಂ.ಫಿಲ್. ಪದವಿ ಪಡ್ದೊ. ಇವು 'ಗೃಹ ತ್ಯಾಜ್ಯ ನಿರ್ವಹಣೆ ಮತ್ತು ಅಭಿವೃದ್ಧಿ' ಎಂಬ ಹೆಸ್ರ್‌ನ ಒಂದು ಪುಸ್ತಕನ ಪ್ರಕಟ ಮಾಡ್ಯೊಳೊ.

"ಘನತ್ಯಾಜ್ಯ ನಿರ್ವಹಣೆಯ ಆರ್ಥಿಕ ಅಂಶಗಳು" ಎಂಬ ವಿಷಯದ ಮೇಲೆ ಸಂಶೋಧನಾ ಕಾರ್ಯ ನಡೆಸಿ 2019ಲ್ಲಿ ಹಂಪಿ ವಿಶ್ವ ವಿದ್ಯಾನಿಲಯಂದ ಡಾಕ್ಟರೇಟ್ ಪಡ್ದೊಳೊ. ಅರೆಭಾಷೆ ಸಾಹಿತ್ಯದ ಬಗ್ಗೆ ವಿಶೇಷ ಅಧ್ಯಯನ ಮಾಡ್ಯೊಳೊ.

## ಭರತೇಶ ಅಲಸಂಡೆಮಜಲು



ಇವು ಪುತ್ತೂರು ತಾಲೂಕಿನ ಪೆರ್ಲಂಪಾಡಿ ಪಕ್ಕಲೆನ ಅಲಸಂಡೆಮಜಲುದವು. ಅಪ್ಪ ಭೋಜಪ್ಪ. ಅಪ್ಪೆ ಗಿರಿಜಾ. ಸುರುನ ಶಾಲೆನ ಕಲ್ಪಿ ಕುಂಟಿಕಾನ. ಪೆರ್ಣಾಜೆ. ಪುತ್ತೂರು. ಸುಳ್ಯಲಿ ಮುಗ್ಸಿ ಪದವಿನ ತಂತ್ರಜ್ಞಾನನ ವಿಭಾಗ ಅದ ಯಾಂತ್ರಿಕಲಿ ಸೈಂಟ್ ಜೋಸೆಫ್ ತಾಂತ್ರಿಕ ಮಹಾವಿದ್ಯಾಲಯ ವಾಮಂಜೂರು. ಮಂಗಳೂರು ಇಲ್ಲಿ ಓದಿದೊ. ತನ್ನ ಸ್ನಾತಕೋತ್ತರ ಪದವಿನ ತುಳುಲಿ ಮಂಗಳೂರು ವಿಶ್ವವಿದ್ಯಾಲಯ ಸಂಧ್ಯಾ ಕಾಲೇಜುಂದ ಪಡ್ದೊ. ಈಗ ಬ್ಯಾಂಕ್ ಆಫ್ ಬರೋಡ ಮಂಗಳೂರಿನ ವಲಯ ಕಚೇರಿಲಿ ಕೆಲ್ಸ ಮಾಡ್ತ ಒಳೊ. ಇವು ಹ್ಯಾಮ್ ರೇಡಿಯೊ operatar ಆಗಿದ್ದು ಇವರ call sign - VU3NNV ಆಗಿದ್ದದೆ. ಕರ್ನಾಟಕದ ಕರಾವಳಿ ವಿಕಿಮೀಡಿಯನ್ಸ್ ಯೂಸರ್ ಗ್ರೂಪ್‌ನ ಸಕ್ರಿಯ ಸದಸ್ಯ ಆಗಿ ತುಳು. ಕನ್ನಡ ಮತ್ತೆ ಇಂಗ್ಲೀಸ್ ವಿಕಿಪೀಡಿಯಕ್ಕೆ ವಿಷಯಗಳ ಸೇರಿಸಿಕಂಡ್ ಬಾಸೆನ ಬೆಳ್ಸುವ ಕೆಲಸ ಮಾಡ್ತ ಒಳೊ. ಸುಳ್ಯ, ಪುತ್ತೂರು ಆಸುಪಾಸ್‌ಲಿ ನಡೆವ ವಿಶೇಷ ಆಚರಣೆ, ಆರಾಧನೆಗಳ ಬಗ್ಗೆ ಅಧ್ಯಯನಾತ್ಮಕ ಬರಹ ಬರ್ದವೆ. ಇವು ಬ್ಲಾಗರ್ ಕೂಡ ಹೌದ್ (http:/ manninaparimala. blogspo.com). ಆಕಾಶವಾಣಿ, ಪೇಪರ್‌ಗಳಲ್ಲಿ ಲೇಖನಗ, ಕವನಗಳ ಪ್ರಕಟ ಮಾಡಿದ್ದವೆ. ಗುಡ್ಡೆ ತಿರ್ಗುದು, ಊರೂರು ಸುತ್ತುದು, ಪಟ ತೆಗೆದು, ದಾಖಲೀಕರಣ ಮಾಡ್ದು, ಸುಲಬ ಗಣಿತ ಬಿಡ್ಸುದು ಹೀಂಗೆ ಹಲವು ಹವ್ಯಾಸಗ ಕೂಡ ಉಟ್ಟು.

---

## ಕಿರಣ್ ಕುಂಬಳಚೇರಿ



ಕೇಶವ ಮತ್ತೆ ಪದ್ಮಾವತಿ ಕೆ.ಕೆ ದಂಪತಿಗಳ ಎರಡ್ನೇ ಮುಂಙ. ಇವು ಎಸ್.ಎಸ್.ಎಲ್.ಸಿ. ಶಿಕ್ಷಣನ ಜ್ಯೋತಿ ಪ್ರೌಢ ಶಾಲೆ ಪೆರಾಜೆ ಮತ್ತೆ ಪಿಯುಸಿನ ಸರಕಾರಿ ಪದವಿ ಪೂರ್ವ ಕಾಲೇಜು ಸುಳ್ಯ ಹಂಗನೇ ಐ.ಟಿ.ಐ ಶಿಕ್ಷಣನ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆ ಮಡಿಕೇರಿ ಇಲ್ಲಿ ಮುಗ್ಸಿಳೊ. ಬೆಂಗಳೂರ್‌ನ ಭಾರತೀಯ ಏರ್‌ಟೆಲ್ ಕಂಪನಿಲಿ ನೆಟ್ವರ್ಕ್ ಇಂಜಿನಿಯರ್ ಆಗಿ ಸುಮಾರು ಏಳ್ ವರ್ಷ ಕೆಲ್ಸ ಮಾಡ್ದ ಇವು ಈಗ ಕೃಷಿ ಕೆಲ್ಸದೊಟ್ಟಿಗೆ ಕೊಡಗಿನ ದಿನಪತ್ರಿಕೆ ಶಕ್ತಿ ಪೇಪರ್‌ನ ವರದಿಗಾರರಾಗಿ ಮತ್ತೆ ಪೆರಾಜೆ ಚಿಗುರು ಯುವಕಮಂಡಲದ ಅಧ್ಯಕ್ಷರಾಗಿ . ಯುವ ಕೋಟೆ ಯುವಕಮಂಡಲ ಪ್ರತ್ತಪೆರಾಜೆನ ಗೌರವ ಸಲಹೆಗಾರರಾಗಿ ಕೆಲ್ಸ ಮಾಡ್ತಾ ಒಳೊ. ಇದರೊಟ್ಟಿಗೆ ಅರೆಭಾಷೆಲಿ ಕಥೆ, ಕವನ, ಪದ್ಯಗಳ ಬರ್ದು ಮತ್ತೆ ಅರೆಭಾಷೆಗೆ ಸಂಬಂಧಪಟ್ಟ ವಿಡಿಯೋಗಳ ಎಡಿಟಿಂಗ್ ಹಿಂಗೆ ಇನ್ನೂ ಕೆಲವು ಹವ್ಯಾಸಗಳ ಹೊಂದಿಳೊ.

# ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ ಅಧ್ಯಕ್ಷರ ಮತ್ತು ಸದಸ್ಯರ ವಿಳಾಸ :

ಅಧ್ಯಕ್ಷರು

**ಶ್ರೀ ಲಕ್ಷ್ಮೀ ನಾರಾಯಣ ಕಜೆಗದ್ದೆ**

ಕನಕಮಜಲು ಅಂಚೆ, ಸುಳ್ಯ ತಾಲೂಕು, ದ.ಕ 574223

ಮೊ ನಂ 9449082249, kajegadde@gmail.com

ಸದಸ್ಯರು

| | | |
|---|---|---|
| **ಶ್ರೀಮತಿ ಜಾನಕಿ ಬೈತಡ್ಕ** | : | #21–16. ರೇಸ್‌ಕೋರ್ಸ್ ರಸ್ತೆ, ಎಲ್‌ಐಸಿ ಹತ್ತಿರ,ಮಡಿಕೇರಿ, ಕೊಡಗು. ಮೊ ನಂ 9008571899 |
| **ಶ್ರೀಮತಿ ಸ್ಮಿತಾ ಅಮೃತರಾಜ್** | : | 'ಹಸಿರು' ಬಾಲೆಂಬಿ ಅಂಚೆ ಚೆಂಬು ಗ್ರಾಮ ಮಡಿಕೇರಿ ತಾಲೂಕು ಮೊ ನಂ 9980402968 |
| **ಶ್ರೀಮತಿ ಚೊಕ್ಕಾಡಿ ಪ್ರೇಮ ರಾಘವಯ್ಯ** | : | ಟಿ.ಜಾನ್ ಲೇಔಟ್, ಶಕ್ತಿ ಕ್ವಾಟ್ರಸ್, ಮಡಿಕೇರಿ, ಮೊ.ನಂ 9900992360 |
| **ಶ್ರೀ ಎ.ಪಿ. ಧನಂಜಯ ಅಗೋಳಿಕಜೆ** | : | 2ನೇ ಮೊಣ್ಣಂಗೇರಿ ಗ್ರಾಮ ಮದೆ ಅಂಚೆ, ಮಡಿಕೇರಿ ತಾಲೂಕು ಮೊ ನಂ 9449731238 |
| **ಶ್ರೀ ಆನಂದ ದಂಬೆಕೋಡಿ** | : | ಮೇಘಸಂಧ್ಯೆ ಎಸ್ಟೇಟ್, ಕತ್ತಲೆಕಾಡು ಗ್ರಾಮ, ಕಡಗದಾಳು ಅಂಚೆ, ಮಡಿಕೇರಿ ತಾಲೂಕು ಮೊ.ನಂ. : 9448141502 |
| **ಡಾ. ದಯಾನಂದ ಕೂಡಕಂಡಿ** | : | ಬಿನ್. ಚಂದ್ರಹಾಸ ಕೂಡಕಂಡಿ ತಾವೂರು ಗ್ರಾಮ, ಭಾಗಮಂಡಲ ಮಡಿಕೇರಿ ತಾಲೂಕು ಮೊ. ನಂ. : 9449766772 dayanandakudakandi@gmail.com |
| **ಶ್ರೀ ಕುಸುಮಾಧರ ಎ.ಟಿ.** | : | ಬಿನ್. ತ್ಯಾಂಪಣ್ಣಗೌಡ ಅಳಿಕೆ ಮಜಲು ಮನೆ ಕಾಯರ್ತೋಡಿ, ಸುಳ್ಯ ಮೊ. ನಂ. : 7090133686 |

| | | |
|---|---|---|
| **ಡಾ. ವಿಶ್ವನಾಥ ಬದಿಕಾನ** | : | ಬಿನ್. ಹೂವಪ್ಪಗೌಡ ಬದಿಕಾನ<br>ನಂ. 9–88/9, ಪ್ಲಾಟ್ ನಂ. 407(34)<br>ಧ್ರುವ ರೆಸಿಡೆನ್ಸಿ, ಯಕ್ಕೂರು,<br>ಕಂಕನಾಡಿ–575002,<br>ಮಂಗಳೂರು, ದಕ್ಷಿಣ ಕನ್ನಡ<br>ಮೊ. ನಂ. : 9449615474 |
| **ಶ್ರೀ ಜಯಪ್ರಕಾಶ್ ಗೌಡ ಮೋಂಟಡ್ಕ** | : | ಕೌಸ್ತುಭ ನಿಲಯ, ಬಿಳಿಮಲೆ ಗ್ರಾಮ<br>ನೆಟ್ಟಣ ಅಂಚೆ, ಕಡಬ ತಾಲೂಕು<br>ದಕ್ಷಿಣ ಕನ್ನಡ–574 230<br>ಮೊ. ನಂ. : 9480293464 |
| **ಶ್ರೀ ಪುರುಷೋತ್ತಮ ಕಿರ್ಲಾಯ** | : | ಬಿನ್. ದೇವಣ್ಣಗೌಡ ಕೆ.<br>ಕಿರ್ಲಾಯ ಮನೆ<br>ಅರಂತೋಡು ಗ್ರಾಮ ಮತ್ತು ಅಂಚೆ<br>ಸುಳ್ಯ ತಾಲೂಕು, ದಕ್ಷಿಣ ಕನ್ನಡ<br>ಮೊ. ನಂ. : 9449770439 |
| **ಡಾ. ಪುರುಷೋತ್ತಮ ಕರಂಗಲ್ಲು** | : | 'ಚಾಣಕ್ಯ'<br>ಸರಕಾರಿ ಪ್ರಥಮ ದರ್ಜೆ ಕಾಲೇಜು<br>ಮುಂಭಾಗ, ಗಾಂಧಿನಗರ, ಕಾವೂರು,<br>ಮಂಗಳೂರು, ದ.ಕ–575015.<br>ಮೊಬೈಲ್ : 9448216070 |
| **ಶ್ರೀ ಭರತೇಶ ಅಲಸಂಡೆಮಜಲು** | : | ಅಲಸಂಡೆಮಜಲು ಮನೆ<br>ಕೊಳ್ತಿಗೆ ಗ್ರಾಮ, ಪುತ್ತೂರು ತಾಲೂಕು<br>ದಕ್ಷಿಣ ಕನ್ನಡ–574 212,<br>ಮೊ. ನಂ. : 9008027271 |
| **ಶ್ರೀ ಕಿರಣ್ ಕುಂಬಳಚೇರಿ** | : | ಬಿನ್. ಕೇಶವ ಕೆ.ಎಸ್. ಕುಂಬಳಚೇರಿಮನೆ<br>ಪೆರಾಜೆ ಗ್ರಾಮ ಮತ್ತು ಅಂಚೆ<br>ಮಡಿಕೇರಿ ತಾಲೂಕು, ಕೊಡಗು ಜಿಲ್ಲೆ<br>ಮೊ. ನಂ. : 9164069225 |

**ರಿಜಿಸ್ಟ್ರಾರ್**

**ಶ್ರೀ ಚಿನ್ನಸ್ವಾಮಿ**
ಪಸಯ್ಯನಪುರ ಗ್ರಾಮ,
ಕಲೀಗೌಡನಹಳ್ಳಿ, ಗುಂಡ್ಲುಪೇಟೆ ತಾಲ್ಲೂಕು
ಚಾಮರಾಜನಗರ ಜಿಲ್ಲೆ
ಮೊ: 9945045327

**ಅರ್ಥ ಸದಸ್ಯರು**

**ಶ್ರೀಮತಿ ಕೆ.ಟಿ.ದರ್ಶನ**
ಸಹಾಯಕ ನಿರ್ದೇಶಕರು
ಕನ್ನಡ ಮತ್ತು ಸಂಸ್ಕೃತಿ ಇಲಾಖೆ
ಕೊಡಗು ಜಿಲ್ಲೆ, ಮಡಿಕೇರಿ
ಮೊ: 9483110593

# ಅಕಾಡೆಮಿದ್ ಪ್ರಕಟಣೆಗ

1 ಸರ್ಮಾಲೆ : ಎಂ.ಜಿ. ಕಾವೇರಮ್ಮ
2 ಅಜ್ಜಪ್ಪನ ಕತಾ ಭಂಡಾರಂದ ಹೆರ್ಕಿದ ಕತೆಗ : ಎಂ.ಜಿ. ಕಾವೇರಮ್ಮ
3 ಬೇರ್‌ಲಿ ಚಿಗ್‌ರ್ : ಬೈತಡ್ಕ ಜಾನಕಿ ಬೆಳ್ಯಪ್ಪ
4 ಕುಂಕುಮ : ಪೂಜಾರೀರ ಜಿ. ಮಾದಪ್ಪ
5 ಬೊಲ್ಪಾಕನ ಮುಗ್ತ್ : ವಿದ್ವಾನ್ ಟಿ.ಜಿ. ಮುಡೂರು
6 ಬೇಟೆನ ಬಿರ್ಸ- ಬಡ್ಡಡ್ಕ ಅಪ್ಪಯ್ಯ ಗೌಡ್ರು : ವೇದಾವತಿ ಅನಂತ ಬಡ್ಡಡ್ಕ
7 ಬೆಳ್ಳಿಮುಷ್ಟಿ : ಕಟ್ರತನ ಕೆ. ಬೆಳ್ಯಪ್ಪ
8 ತೋರಣ : ಬಾರಿಯಂಡ ಆರ್. ಜೋಯಪ್ಪ
9 ಬೊಲ್ಪು : ಲೋಕೇಶ್ ಕುಂಚಡ್ಕ
10 ಮತ್ತೆ ಸಿಕ್ಕಿತ್ ಕುಂಕುಮ : ಕಟ್ರತನ ಲಲಿತ ಅಯ್ಯಣ್ಣ
11 ನೆಂಪುಗಳ ರಂಗೋಲಿ : ಎಂ.ಜಿ. ಕಾವೇರಮ್ಮ
12 ಹೊಸ ಬೊದ್ಕ್ : ಉದಯಕುಮಾರಿ, ಚೆಂಬು.
13 ಸಂಸ್ಕೃತಿ ಸಂಪತ್ತ್ : ಅರೆಭಾಷೆ ಸಂಸ್ಕೃತಿ ಪರಿಚಯ
14 ಬೆಳ್ಳಿ ಚುಕ್ಕೆಗ : ಬೈತಡ್ಕ ಜಾನಕಿ ಬೆಳ್ಯಪ್ಪ
15 ಅನುಭವಧಾರೆ : ಹೊದ್ದೆಟ್ಟಿ ಭವಾನಿಶಂಕರ
16 ರುಚಿ : ಅರೆಭಾಷೆ ಸಂಪ್ರದಾಯದ ಅಡಿಗೆ.
17 ಸಫಲ : ಅರೆಭಾಷೆ ಅಕಾಡೆಮಿಯ 2ನೇ ಸಮಿತಿಯ 3 ವರ್ಷಗಳ ಸಾಧನೆ.
18 ಬದುಕು : ಎಂ.ಜಿ.ಕಾವೇರಮ್ಮ
19 ನೆಂಪುನ ಜೊಂಪೆ : ವಿನೋದ್ ಮೂಡಗದ್ದೆ
20 ಕಾಡ್‌ನ ಮಕ್ಕ : ಕೆ.ಆರ್.ತೇಜ ಕುಮಾರ್
21 ಅಪ್ಪ ಹೇಳ್ದ ಹತ್ತ್ ಕತೆಗ : ಭವಾನಿ ಶಂಕರ್ ಅಡ್ತಲೆ
22 ನೆಗೆ ಬೇಕ್ ಕೇದಗೆ ಗೊನೆ ಹಾಂಗೆ : ಡಾ॥ ಕರುಣಾಕರ ನಿಡಂಜಿ
23 ತಬ್ಲಿ ಮಂಜ : ಪಿ.ಜಿ.ಅಂಬೆಕಲ್
24 ಮಿಂಪುಳಿ : ಡಾ॥ ಪುನೀತ್ ರಾಘವೇಂದ್ರ ಕುಂಟುಕಾಡು
25 ಅರೆಬಾಸೆ ವ್ಯಾಕರಣ : ಪ್ರೊ. ಕೆ. ಕುಶಾಲಪ್ಪ ಗೌಡ




# ಹಿಂಗಾರ



## ಅರೆಭಾಷೆ ತ್ರೈಮಾಸಿಕ ಪತ್ರಿಕೆ

**ಅರೆಬಾಸೆ ನಮ್ಮ ಬಾಸೆ ಬನ್ನಿ ಓದೊಮ ಬಾಸೆ ಬೆಳ್ಸಮೋ**

ನಿಮ್ಮೊಟ್ಟಿಗೆ ಮೊಬೈಲ್ ಬ್ಯಾಂಕಿಗ್ ಉಟ್ಟಾ?
ಹಂಗಾರೆ ಅದರ್‌ಂದ ಹಿಂಗಾರ ಪತ್ರಿಕೆನ
ಮನೆಗೆ ತರಿಸಿಕೊಂಬೊಕೆ ಆದೆ.
ಇದ್ ನಿಮ್ಮ ಅನುಕೂಲಕ್ಕೆ ನಾವ್
ತಂದ ಹೊಸ ವ್ಯವಸ್ತೆ.

ದುಡ್ಡ್ ಕಟ್ಟಿ ಆದ ಮೇಲೆ ನಿಮ್ಮ ಮೊಬೈಲಿಗೆ
ಬ್ಯಾಂಕಿಂದ ಯುಟಿಆರ್ ನಂಬರ್ ಬಂದದೆ.
ಈ ಮೆಸೇಜ್ ನೊಟ್ಟಿಗೆ

- ನಿಮ್ಮ ಪೂರ ಅಂಚೆ ವಿಳಾಸ
- ದುಡ್ಡ್ ಕಟ್ಟಿದ ದಿನ, ಹೊತ್ತ್
- ಎಸ್ಟ್ ದುಡ್ಡ್ ಕಟ್ಟಿದರಿಂತ

ಎಲ್ಲ ವಿವರನ ಅರೆಭಾಷೆ ಸಂಸ್ಕೃತಿ ಮತ್ತು
ಸಾಹಿತ್ಯ ಆಕಾಡೆಮಿನ ವಾಟ್ಸ್ಯಾಪ್
ನಂಬ್ರ 6362 522 677 ಕಳ್ಸಿಕೊಡಿ.

- ಕತೆ/ಪದ್ಯ/ಚುಟುಕು/ಲೇಕನಗಳ ಹಿಂಗಾರಲಿ ಬರೆಯಕ್
- ಬರವಣಿಗೆ ಮಾತ್ರ ನಾಲ್ಕ್ ಪುಟಕೆ ಸೀಮಿತ ಇರೊಕು.
- ಪುಟದ ಒಂದು ಬದಿಲಿ ಮಾತ್ರ ಸ್ಪಷ್ಟ ಬರ್ದಿರಕು.
- ನಿಮ್ಮ ಲೇಕನನ ಇ-ಮೈಲ್ ಮೂಲಕ ಕಳ್ಸಿ.
- ಹೆಸರ್/ ವಿಳಾಸ / ದೂರವಾಣಿ ಅಂಕಿಗ ಬರ್ದಿರಕು.




ಈ ಅರೆಬಾಸೆ ಪತ್ರಿಕೆ ನಿಮ್ಮ ಮನೆಲಿನೂ ಇರಲಿ

**ಮೂರ್ ವರ್ಸಕ್ಕೆ ರೂ. 200-00** | **ಅಜೀವ ರೂ. 600-00**

ನೆಂಪಿರ್ಲಿ, ಮೇಲೆ ಹೇಳಿರ್ವ ವಿವರಗಳ ನೀವ್ ಕೊಟ್ಟರೆ ಮಾತ್ರ ನಾವ್ಗೆ ಗೊತ್ತಾದೆ.
ಈ ವಿವರನ ಕೊಡದಿದ್ದರೆ ಹಿಂಗಾರನ ಕಳ್ಸಿಕೊಡಿಕೆ ಕಸ್ಟ ಆದೆ. ನಮ್ಮ ಅಕೌಂಟ್ ವಿವರ ಹಿಂಗೆ ಉಟ್ಟ್.

| | |
|---|---|
| Account Holder Name | : Registrar Karnataka Arebhashe Samsruthi & Sahithya Academy. |
| Account Number | : 64102780908 |
| IFSC | : SBIN0017853 |
| Branch | : Madikeri Town Branch. |

**ಕರ್ನಾಟಕ ಅರೆಭಾಷೆ ಸಂಸ್ಕೃತಿ ಮತ್ತು ಸಾಹಿತ್ಯ ಅಕಾಡೆಮಿ**

ಕಾಫಿಕೃಪಾ ಕಟ್ಟಡ, ರಾಜಸೀಟ್ ರಸ್ತೆ, ಮೊದಲನೆ ಮಹಡಿ, ಮಡಿಕೇರಿ

 arebaseacademy@gmail.com  08272-223055

**HINGARA** **Arebhashe Quarterly** Volume -4, Issue -2

Date : 30.06.2020 Kodagu KARARB/2016/69571 Price : 20/- Pages : 80



ಚೆಂಬುಲಿ ನಡ್ದ ಕೆಡ್ಡಾಸ ಹಬ್ಬದ ಉದ್ಘಾಟನೆ



ಚೆಂಬುಲಿ ನಡ್ದ ಕೆಡ್ಡಾಸ ಹಬ್ಬದ ಉದ್ಘಾಟನಾ ಸಮಾರಂಭದ ವೇದಿಕೆಲಿರುವ ಗಣ್ಯರ್

Printed by **Chinnaswamy** on behalf of Registrar, **Karnataka Arebhase Samskruthi Mathu Sahitya Academy,** and, Published by **Chinnaswamy** on behalf of **Karnataka Arebhase Samskruthi Mathu Sahithya Academy** (name of Owner) and Printed at **Sri Krishna Computers & Printers,** Pooja Arcade, Madikeri. And Published at **Karnataka Arebhashe Samskruthi Mathu Sahithya Academy,** Coffee Krupa Building, 1st Floor, Raja Seat Road, Madikeri, Kodagu District. Editor : **Dr. Dayananda Kudakandi**